# ದೇವರು

ದೇವೇಗೌಡ ಲಿಂ.



ಪ್ರಕಾಶಕರು :
ದೇವ ತಪೋವನ ಸೇವಾನ್ಯಾಸ
ದೇವತಪೋವನ, ಬನ್ನಿಮುಕ್ಕೋಡ್ಲು
ಕನಕಪುರ ತಾಲ್ಲೂಕು

# ನಮ್ಮನುಡಿ ಎರಡು

ಈ ಪುಸ್ತಕ ಇಂಗ್ಲೀಷ್ ಹಸ್ತಾಕ್ಷರದ ಭಾಷಾಂತರ. ಮಾತೃ ಭಾಷೆಯಲ್ಲಿ ಮೊದಲು ಹೊರತರುವ ಹಾರೈಕೆಯನ್ನು ಪೂರೈಸಿಕೊಂಡಿದ್ದೇನೆ. ಯಾವ ಭಾಷೆಯಲ್ಲೂ ನಾನು ಪಂಡಿತನಲ್ಲ ವಿಶೇಷ ಸಾಹಿತ್ಯ ಸಂಜ್ಞಾನ ವಿದೆಯೆಂದು ವೇಷ ತಾಳಲಾರೆ ನನ್ನಂಥವನು ನವೀನವಾಗಿ, ಏನನ್ನೂ ಹೇಳುವುದು ಕಷ್ಟ. ಈ ಬರವಣಿಗೆಯಲ್ಲಿ ಮೆಚ್ಚತಕ್ಕದ್ದು ಏನಾದರೂ ಇದ್ದರೆ, ನಾನು ಉಪಕೃತನಾಗಿರುವ ಪ್ರಾಜ್ಞರಿಗೆ ಮೀಸಲು. ಅವರ ಹೆಸರುಗಳನ್ನು ಪ್ರತ್ಯೇಕಿಸಲಶಕ್ಯನಾದುದಕ್ಕೆ ವಿಪುಲ ವಿಷಾದ ವ್ಯಕ್ತಪಡಿಸುತ್ತೇನೆ. ಮೊದಲಿನಿಂದಲೂ, ವಿಚಾರಶೀಲತೆಯ ಸಾಹಿತ್ಯಗಳನ್ನು ಕೊಂಡು, ಓದಿ, ಅಧ್ಯಯನ ಮಾಡಿ. ಮನಸ್ಸಿಗೆ ಒಪ್ಪಿದ, ವಿವೇಕವಚನಗಳನ್ನು ಮತ್ತು ಲೋಕ ಕಲ್ಯಾಣದ ಅಭಿಪ್ರಾಯಗಳನ್ನು ಗುರ್ತಿಸಿ, ಬರೆದಿಟ್ಟುಕೊಳ್ಳುವುದು ಹಿತವಾಯ್ತು. ಕುಂದುಗಳಿಲ್ಲದಂತೆ ಈ ಪುಸ್ತಕ ಹೊರತರುವ ಹೃತ್ಪೂರ್ವಕದ ಹಂಬಲ ಸಂಪೂರ್ಣವಾಗಿ ಸಫಲವಾಗಿಲ್ಲ ಮರುಗೆಣ್ಣೆ ಮತ್ತು ಥಳಕು ರಹಿತವಾದ ನನ್ನೀ ಬರವಣಿಗೆಯ ವಿಚಾರದಲ್ಲಿ ಸಹೃದಯತ ಸಲಹೆಗಳನ್ನು ಶಿರಸಾವಹಿಸಿ ಸ್ವೀಕರಿಸಲಾಗುವುದು.

ಇದರೊಳಗಿರುವ, ಆತ್ಮಪೂರ್ವಕ ಮತ್ತು ಅನುರಾಗದ ಆಲೋಚನೆಗಳು, ಅಲ್ಲದೆ ನಮ್ರ, ಯಥಾರ್ಥ ಮತ್ತು ಸೌಮ್ಯ ಸಲಹೆಗಳೇ ಈ ಕಿರು ಹೊತ್ತಿಗೆಯ ಪರಿಚಯ ಮತ್ತು ಪೀಠಿಕೆಗಳು.

ಈ ಪುಟ್ಟ ಪುಸ್ತಕಕ್ಕೆ, ದೇವರು ಎಂದು ಹೆಸರಿಸಿ, ಸಾಮಾನ್ಯವಾಗಿ ಮಾನವ ದೌರ್ಬಲ್ಯಗಳನ್ನು, ನಿರ್ದಿಷ್ಟವಾಗಿ ರಾಜಕಾರಣಿಗಳ ದುಷ್ಕಾರ್ಯಗಳನ್ನು ದುರುಗುಟ್ಟಿ ನೋಡಿರುವ ದಾರುಣತೆ ದುರಾದೃಷ್ಟಕರ, ಎಂಬುದು ಕೆಲವರ ದೃಷ್ಟಿಕೋನವಾಗಬಹುದು ಲೇಖಕನನ್ನು ರಂಧ್ರಾನ್ವೇಷಿ ಎನ್ನದೆ ಹಿತೈಷಿ ಎಂದರೆ ಅವರಿಗೆ ಶ್ರೇಯಸ್ಸುಕಾರಿ ಅಲ್ಲದೆ ರಾಷ್ಟ್ರಕ್ಕೆ ಹಿತಕಾರಿ. ನನ್ನ ಮನಸ್ಸಿನ ಆತಂಕ ಮತ್ತು ಅಳಲನ್ನು ಓದುಗ

ರೊಡನೆ ಹಂಚಿಕೊಳ್ಳುವ ಹಂಬಲವೇ ಹೊರತು ಚುಚ್ಚುನುಡಿ ಅಲ್ಲ. ಈ ಕೆಲಸ ಗಾಳಿ ಗುದ್ದಿದಂತೆ, ತೊರೆ ಮರಳನ್ನು ಉತ್ತಂತೆ ನಿಷ್ಪ್ರಯೋಜಕ, ಎಂದು ಅನೇಕಸಾರಿ ಅನಿಸಿತು. ಆದರೆ ನಮ್ಮ ಹಿರಿಯರು ಇದೇ ರೀತಿ ಹತಾಶರಾಗಿ, ಸುಮ್ಮನೆ ಇದ್ದಿದ್ದರೆ, ರಾಷ್ಟ್ರವಿಮೋಚನೆಯಾಗುತ್ತಿತ್ತೆ? ಎಂಬ ಸತ್ಯ ಹೊಸ ಹುರುಪು ಹುಟ್ಟುಹಾಕಿತು. ಅಲ್ಲದೆ ವ್ಯಕ್ತಿಯ, ಸಮಾಜದ, ರಾಷ್ಟ್ರದ ಹಿತಕ್ಕಾಗಿ ಸೇಡು ರಹಿತ ಖಂಡನೆ ಅಸಮ್ಮತಿಯಲ್ಲ ನಮ್ಮ ಶ್ರೇಷ್ಠರು ಮಾತೃಭೂಮಿ ವಿಮೋಚನೆಗಾಗಿ ಅಹಿಂಸಾ ಮಾರ್ಗದಲ್ಲಿ ಸತ್ಯಾಂಶವನ್ನು ನಿರ್ಭಯವಾಗಿ ಬ್ರಿಟಿಷರಿಗೆ ಹೇಳುತ್ತಿದ್ದುದು ಪ್ರಸಿದ್ಧ ಇತಿಹಾಸವಾಗಿದೆ ಅಬದ್ಧ ಆರೋಪಣೆ, ಅಸೂಯೆಯ ಅಪ್ಪು ಅರ್ಧ ಶತಮಾನ ಕಾಲದಿಂದ ನನ್ನ ಪಾಲಿಗೆ ಬಂದಿರುವ, ತನಿಖೆ ಮಾಡುವ ಉದ್ಯೋಗದಿಂದ, ಸತ್ಯಾಂಶದ ದೋಷಾರೋಪಣೆ ಹೊರಿಸುವುದು ನನ್ನ ಹುಟ್ಟು ಗುಣವಾಗಿದೆ. ಈ ಸತ್ಯಾನ್ವೇಷಣೆಯ ಕಾರ್ಯ ಒಂದು ಶ್ರೇಷ್ಠಕೊಡುಗೆ ಎಲ್ಲಾ ವರ್ಗ, ಎಲ್ಲಾ ಅಂತಸ್ತಿನ ವ್ಯಕ್ತಿಗಳ ವೈಯಕ್ತಿಕ ದೌರ್ಬಲ್ಯತೆ ಮತ್ತು ಯೋಗ್ಯತೆಯನ್ನು ಅರಿತುಕೊಳ್ಳುವ ಸದವಕಾಶ ಒದಗಿಸುತ್ತಿದೆ ಈ ಜವಾಬ್ದಾರಿಯುತವಾದ ಕರ್ತವ್ಯಪಾಲನೆಗೆ, ಸ್ವಶಿಕ್ಷೆ, ಆತ್ಮ ಚಿಂತನೆ, ಆತ್ಮ ನಿಗ್ರಹ, ಆತ್ಮ ನಿಂದನೆ, ಆತ್ಮ ನಿರಾಕರಣೆ, ಮತ್ತು ಆತ್ಮ ವಿಶ್ವಾಸ ಮುಂತಾದ ಶ್ರೇಷ್ಠ ಗುಣಗಳು ಅತ್ಯಾವಶ್ಯಕ ನಾನು ಇವುಗಳನ್ನೆಲ್ಲ ಸಂಪೂರ್ಣವಾಗಿ ಕೈಗೂಡಿಸಿ ಕೊಂಡಿದ್ದೇನೆ ಎಂಬುದು ಅಸತ್ಯ. ಪ್ರಯತ್ನ ಮಾತ್ರ ನಿರಂತರ ನಡೆಯುತ್ತಲೆ ಇದೆ. ಮನಸ್ಸನ್ನು ಹದ ಮಾಡುವ ತಂತ್ರ ಉಸಿರಿರುವವರೆಗೂ ನಡೆಯುತ್ತಿರಬೇಕೆಂಬುದು ಮಾತ್ರ ನಿಜ. ವಯಸ್ಸು ವೃದ್ಧಾಪ್ಯ ತಂದಿದ್ದರೂ, ಸಂಪೂರ್ಣ ಜಿತೇಂದ್ರಿಯತೆ ಹೊಂದದೆ ಇದ್ದರೂ, ಜಿಜ್ಞಾಸೆ ಜಾಗೃತವಾಗಿರುವುದು, ಸಾಧನೆ ಮತ್ತು ಸಫಲತೆಗಾಗಿ, ಚಿತ್ತ ಹಾತೊರೆಯುತ್ತಿರುವುದು ನನ್ನ ಸುದೈವ.

"ಯಥಾ ರಾಜ ತಥಾ ಪ್ರಜಾ" ಎಂಬ ಸಿದ್ಧಾಂತ, ಸ್ಥಿರವಾದುದು. ಸಾಮಾಜಿಕ, ಆರ್ಥಿಕ, ನೈತಿಕ, ವಿದ್ಯಾಭ್ಯಾಸ, ವಿಜ್ಞಾನ, ಕಲೆ, ಸಂಸ್ಕೃತಿ, ನಾಗರೀಕತೆ, ಶಾಂತಿ ಮುಂತಾದ ಪ್ರತಿಯೊಂದು ಮಾನವ

ಸಂಬಂಧಗಳು ರಾಜಕೀಯ ರಂಗಿನಿಂದ ಚಿತ್ರಿಸಲ್ಪಡುತ್ತಿವೆ. ಧರ್ಮಾ ಧರ್ಮ, ವಿವೇಚನೆ ಇಲ್ಲದ ರಾಜಕೀಯ ರಕ್ಕಸಕಾರಿ. ರಾಷ್ಟ್ರೀಯ ದುರಂತದ ರೌದ್ರರೋಗಾಣು. ಪ್ರಜಾತಂತ್ರದಲ್ಲಿ ಪ್ರತಿನಿಧಿಗಳ ಪಾತ್ರ ಬಹು ಪವಿತ್ರ, ಪ್ರಮುಖ ಮತ್ತು ಜವಾಬ್ದಾರಿಯುತವಾಗಿರಬೇಕಾದುದು. ಬಹುತೇಕ, ರಾಜಕಾರಣಿಗಳು, ದೈವಕಲ್ಪನೆಯನ್ನೂ ಉದ್ದೇಶ ಪೂರ್ವಕವಾಗಿ, ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ ದೈವದ ಅಪಾರ್ಥ, ಅಸಂಖ್ಯ, ಅಸಂಗತ, ಅಪತ್ತು, ಅನರ್ಥ, ದುರಂತ, ದಳ್ಳುರಿ, ತಿಕ್ಕಾಟ ಘರ್ಷಣೆ, ವಿರಸ ಮತ್ತು ವಿನಾಶ, ಮುಂತಾದ ಪಾಪ ರೀತಿಗಳಿಗೆ ಮೂಲ. ಇಂದಿನ ಸ್ವಾರ್ಥ ರಾಜಕೀಯ ವ್ಯವಸ್ಥೆಯ ಅಪ ಯೋಜಕತೆಯನ್ನು, ಜನ ಅರಿತಿದ್ದಾರೆ. ತತ್‌ಕ್ಷಣದ ಮಾರ್ಪಾಡಿಗಾಗಿ ಹಾತೊರೆಯುತ್ತಿದ್ದಾರೆ. ಸಾಮಾನ್ಯರನ್ನು ಸುತ್ತುಕೊಂಡಿರುವ ಈ ವಿಷಮ ಚಕ್ರವನ್ನು ಧ್ವಂಸ ಮಾಡಬಲ್ಲ, ವೀರರಿಗೆ, ವಿಚಾರವಂತರಿಗೆ ನನ್ನೀ ಬರವಣಿಗೆ ಮುಡುಪು.

ಮಾನವ, ಸನ್ನಿಹಿತವಾಗಿರುವ, ಮತ್ತು ತನ್ನ ತಲೆಯಮೇಲೆ ತೂಗು ತ್ತಿರುವ ನಿರ್ಮೂಲದ, ನಿಮಿತ್ತ ಏನು ಎಂಬುದನ್ನು ಅರಿತುಕೊಳ್ಳುವ ಅವಶ್ಯಕತೆ ಅತಿ ಅವಸರವಾಗಿದೆ. ಓದುಗರು, ಮಾನವ ಧರ್ಮವಾದ ಭಾರತೀಯ ತತ್ವಶಾಸ್ತ್ರವನ್ನು ವೈಚಾರಿಕತೆಯಿಂದ ಆತ್ಮಪೂರ್ವಕವಾಗಿ ಅಭ್ಯಾಸ ಮಾಡಿ, ಮಾನಸಿಕ ಬಂಧನದಿಂದ ಹೊರಬಂದು, ರಾಷ್ಟ್ರೀಯ ತೆಯ, ಕರ್ತವ್ಯ ಜ್ಞಾನವನ್ನು ಜಾಗೃತಗೊಳಿಸಿಕೊಂಡು ದೇಶದ ಉಳಿ ವಿಗೆ, ಅದರ ಮೂಲಕ ಮಾನವತೆಯ ವಿನಾಶ ತಪ್ಪಿಸುವ ದೆಸೆಯಲ್ಲಿ, ಒಂದು ದಿಟ್ಟಕಾರ್ಯ ರೀತಿಯನ್ನು ರಚಿಸಿಕೊಂಡರೆ ನನ್ನ ಶ್ರಮ ಸಾರ್ಥಕ. ಮಾನವ ಕುಲಕೋಟಿ ಉದ್ಧಾರಕ್ಕೆ; ಮಾನವ ಸಂಸಾರದ ಸುಪುತ್ರ ಸುಪುತ್ರಿಯರು ತಮ್ಮ ಶೀಲವೃದ್ಧಿಗೆ ಬುದ್ಧಿಪೂರ್ವಕವಾಗಿ ಪ್ರಯಾಸ ಪಡುವ ನಿರಂತರದ ಆಸಕ್ತಿಯೇ ಅಡಿಪಾಯ. ಅಂಥ ಶಿಸ್ತಿನ ಸಿಪಾಯಿ ಗಳಿಗೆ ಮತ್ತು ಕಾಯ, ವಾಚ, ಮನಸಾ, ನಿರ್ಮಲ ನಿಷ್ಕಪಟ ನಿಸ್ವಾರ್ಥ ಮತ್ತು ವಿರಳ ವಿಶ್ವ ರಾಜಕಾರಣಿಗಳಿಗೂ, ಗಾಢ ಗೌರವದಿಂದ ಈ ಗ್ರಂಥವನ್ನು ಸಮರ್ಪಿಸುತ್ತೇನೆ.

# ದೇವರು

ದೇವರು ಯಾರು ?

ಎಲ್ಲಿದ್ದಾನೆ ?

ಹೇಗಿದ್ದಾನೆ ?

ಅವನಿಗೂ ಮಾನವನಿಗೂ ಏನು ಸಂಬಂಧ ?

ಅವನನ್ನು ಸಿದ್ಧಿಸಿಕೊಳ್ಳುವ ಬಗೆ ಹೇಗೆ ?

ಅದರಿಂದ ಉಪಯೋಗವೇನು ?

ಈ ಪ್ರಯಾಣಿಕ ಎಲ್ಲಿಂದ ಬಂದ ? ಎಲ್ಲಿಗೆ ಹೋಗುತ್ತಿದ್ದಾನೆ ? ಈ ದೇಶಾಟನೆಯು ನೋವು-ನಲಿವಿನ ಗುಟ್ಟೇನು ? ಈ ಸಂತೆಯು ಕೇಕೆ-ಕಿರುಚುಗಳ ಗೂಢವೇನು ? ಈ ಯಾತ್ರೆಯು ಅಳು - ನಗುಗಳ ಅಂತರಂಗವೇನು ? ಅಲ್ಲದೆ ಮಹಾ ದುಃಖಕರವಾದ ಇಹದ ಯಾತ್ರೆಯನ್ನು ಸುಖಮಯ ಮಾಡುವ ಮಾರ್ಗ ಯಾವುದು ? ಎಂಬ ಈ ನಿತ್ಯ ಪ್ರಶ್ನೆಗಳ ಸಮಂಜಸ ಉತ್ತರಕ್ಕಾಗಿ, ಲೋಕ ಕಾತುರತೆಯಿಂದ ಕಾಯುತ್ತಲೇ ಇದೆ.

## ಭಾರತ ಬೃಹತ್ ಪ್ರಯೋಗ ಶಾಲೆ

ನಮ್ಮ ಪ್ರಾಚೀನರು ಮಾನವ ಕಲ್ಯಾಣಕ್ಕಾಗಿ, ಈ ಕ್ಲಿಷ್ಟ ಸಮಸ್ಯೆ-ಗಳನ್ನು ಪರಿಹರಿಸಲು, ಸತತ ಪ್ರಯತ್ನ ನಡೆಸಿದ್ದಾರೆ. ಮಾನವ ಇತಿಹಾಸ, ಸಮಾಜ ವಿಕಾಸನದ ಸಾಕ್ಷ್ಯಚಿತ್ರ. ಪ್ರಾಚೀನ ಗುಹೆ ವಾಸಿಗೆ ತನ್ನ ಶಾರೀರಕ ಅವಶ್ಯಕತೆಗಳ ಆರ್ಜನೆ ಏಕೈಕ ಗುರಿಯಾಗಿತ್ತು.

ಹೊಟ್ಟೆಪಾಡಿನ ಮೃಗ ಮಾದರಿಯ ಮಾನವ ಆಧ್ಯಾತ್ಮಿಕ ಸುಸಂಸ್ಕೃತ-
ನಾಗಿ ಮಾರ್ಪಾಡಾಗಲು ಶ್ರಮ ವಹಿಸಿರುವುದನ್ನು ನೋಡುತ್ತಿದ್ದೇವೆ.
ಪುಣ್ಯಭೂಮಿ, ಕರ್ಮಭೂಮಿ, ಧರ್ಮಭೂಮಿ ಮತ್ತು ತ್ಯಾಗಭೂಮಿ
ಯಾದ ಭಾರತ, ವಿಶ್ವದ ಮಾನವ ಕಲ್ಯಾಣಕ್ಕಾಗಿ ಒಂದು ಬೃಹತ್
ಪ್ರಯೋಗ ಶಾಲೆಯಾಗಿ ಮುಂದುವರೆಯುತ್ತಿದೆ ಮಾನವ ಕುಲದ
ಅದೃಷ್ಟ ರೂಪಿಸುವ ಪುಣ್ಯಕಾರ್ಯದಲ್ಲಿ ತನ್ನ ಪಾತ್ರವನ್ನು ನಿರಂತರ
ವಾಗಿ ನಿಷ್ಠೆಯಿಂದ ನಿರ್ವಹಿಸುತ್ತಾ ಬಂದಿದ್ದಾರೆ ಈ ಶ್ರೇಷ್ಠ ಭಾರತೀ
ಋಷಿಗಳ ವಿಶಿಷ್ಟ ಗುಣಗಳೆಂದರೆ ತಮಗೆ ತಾವೇ ಆರತಿ ಎತ್ತಿದವರಲ್ಲ.
ಹಾರ ತುರಾಯಿಗಳಿಗಾಗಿ ಹಂಬಲಿಸಿದವರಲ್ಲ. ಸರ್ವ ಮಾನವ ಕುಲ
ನಿಷ್ಠಾಪರರು ಈ ಶ್ರೇಷ್ಠರು, ಸುವಿಚಾರವೂ ತರ್ಕಸಮ್ಮತವೂ ಆದ
ಮಾನವ ತತ್ವಶಾಸ್ತ್ರವನ್ನು ಊರ್ಜಿತಗೊಳಿಸಲು ಶತಮಾನಗಳ ಕಾಲ
ಅದ್ಭುತ ಹೋರಾಟವನ್ನು ನಡೆಸಿದ್ದಾರೆ ಈ ಪಟ್ಟಿನ ಪ್ರಯೋಗದ
ಫಲದಿಂದ ವೇದ, ಮತ, ದೇವರು, ಧರ್ಮ ಎಂಬುವು ಸಿದ್ಧಿಸಿದವು

## ಧರ್ಮಗ್ರಂಥಗಳು

ಸರ್ವ ಮತಗಳ ಉಸಿರಾದ ಧರ್ಮಗ್ರಂಥಗಳು ನಿತ್ಯ, ಸತ್ಯ, ಸನಾತನ.
ಅವು ಧರ್ಮ ಅಳಿಯದಂತೆ ಕಾಪಾಡುತ್ತವೆ. ಅಸಂಪ್ರದಾಯ ಮತ್ತು
ಅಜ್ಞಾನ ಹಬ್ಬದಂತೆ ತಡೆಯಲು ಅವಶ್ಯಕವಾದ, ಅಧಿಕಾರಯುಕ್ತವಾದ
ಆಧಾರಪೂರ್ವಕವಾದ, ಸಪ್ರಮಾಣದ ಹೇಳಿಕೆಗಳು ಅವುಗಳಲ್ಲಿ ಹೇರಳ
ವಾಗಿ ಹುದುಗಿವೆ.

ಬಹುಮಟ್ಟಿಗೆ ಪ್ರಪಂಚದ ಮತಾವಲಂಬಿಗಳು ನಿಖರವಾದ ಒಂದೇ
ಒಂದು ಧರ್ಮಗ್ರಂಥವನ್ನು ಒಪ್ಪಿ, ಸಂಪೂರ್ಣ ಮನನ ಮಾಡಿ ಅದರ
ನಿರ್ದೇಶನಗಳನ್ನು ಶ್ರದ್ಧೆಯಿಂದ ಪಾಲಿಸುತ್ತಾರೆ. ಆದರೆ ಭಾರತೀಯರು
ಶಾಸ್ತ್ರಗಳ ರಾಶಿಗಳಿಂದ ಸುತ್ತುವರಿಯಲ್ಪಟ್ಟು ಉಭಯ ಸಂಕಟದಲ್ಲಿ

ತೊಳಲುತ್ತಿದ್ದಾರೆ. ತಮ್ಮ ಧರ್ಮಗ್ರಂಥ ಯಾವುದು ಎಂಬ ಸ್ಪಷ್ಟ ಅರಿವು ಅವರಿಗಿಲ್ಲ.

## ವೇದ–ವಿಶ್ವತತ್ವ

ಸನಾತನ ಹಿಂದು ಧರ್ಮದ ಪ್ರತಿಯೊಂದು ಶಾಸ್ತ್ರ ಸೂತ್ರಗಳು ವೇದಗಳಿಂದ ಜನ್ಮತಾಳಿವೆ ವೇದ ಎಂದರೆ ಜ್ಞಾನ. ವೇದಾಂತ ಅಂದರೆ ಅರಿವಿನ ಅಂತ್ಯ. ಇದೇ ಜ್ಞಾನದ ಭಂಡಾರ. ಅದು ಬಹು ಪುರಾತನವಾದ ಧಾರ್ಮಿಕ ತತ್ವ. ನಿತ್ಯಬದುಕಿನ ವಿಚಾರವಾಗಿ ಹೊರಬಿದ್ದಿರುವ ಜ್ಞಾನ, ವಿಜ್ಞಾನ, ವಿಶ್ಲೇಷಣೆಯೇ ವೇದ. ಇದರಲ್ಲಿ ಸರ್ವಕಾಲಕ್ಕೂ ಸಮಗ್ರ ವಿಶ್ವಕ್ಕೂ ಅನ್ವಯಿಸುವ ಗುಹ್ಯತತ್ವಗಳು ಅಡಗಿವೆ. ವೇದದಲ್ಲಿ ವರ್ಣಿಸದೇ ಇರುವ ತತ್ವಗಳು ಇನ್ನಾವ ಮತಗ್ರಂಥಗಳಲ್ಲೂ ಕಾಣುತ್ತಿಲ್ಲ.

## ಧರ್ಮಪ್ರಸ್ಥಾನತ್ರಯ

ಉಪನಿಷತ್ತು ವೇದದ ಸಾರ. ಬ್ರಹ್ಮಸೂತ್ರ ಅಥವ ವೇದಾಂತ ಸೂತ್ರ ಉಪನಿಷತ್ತಿನ ಸಾರ. ಇವುಗಳಲ್ಲಿ ವಿರುದ್ಧವಾದ ತತ್ವಗಳಿಲ್ಲ. ಆದರೂ ಅಲ್ಲಿರುವ ಗುಹ್ಯತತ್ವಗಳನ್ನು ಎಲ್ಲರೂ ಸುಲಭವಾಗಿ ಅರ್ಥಮಾಡಿಕೊಳ್ಳಲು ಕಷ್ಟ. ಶ್ರೀ ಕೃಷ್ಣಪರಮಾತ್ಮ ಲೋಕ ಕಲ್ಯಾಣಕ್ಕಾಗಿ ಮೇಲ್ಕಂಡ ಎಲ್ಲಾ ಗ್ರಂಥಗಳ ಸಾರವನ್ನು ತನ್ನ ಶಿಷ್ಯ ಅರ್ಜುನನಿಗೆ ಬೋಧಿಸಿದ. ವ್ಯಾಸ ಮಹಾಋಷಿಗಳು ಮಾನವ ಕುಲದ ಉದ್ಧಾರಕ್ಕೆ ಕೃಷ್ಣಬೋಧೆಯನ್ನು ಭಗವದ್ಗೀತೆಯಾಗಿ ಬರೆದಿದ್ದಾರೆ. ಧರ್ಮ ಪ್ರಸ್ಥಾನ ತ್ರಯ ಎಂದು ಕರೆಯಲ್ಪಟ್ಟಿರುವ ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ - ಭಾರತದ ಧರ್ಮಗ್ರಂಥಗಳು. ಇದೇ ತ್ರಿವೇಣಿ ಅಥವ ಪ್ರಸ್ಥಾನ ತ್ರಯ. ಪುರಾತನ ಧರ್ಮಗ್ರಂಥಗಳು ಹಸುಗಳಾದರೆ ಭಗವದ್ಗೀತೆ ಹಾಲು. ಹಸುವಿನ ಬಣ್ಣ, ಗಾತ್ರ, ಮೇವು ಯಾವುದಾದರೂ, ಹಾಲು ಮಾತ್ರ ಬಿಳುಪು. ಶುಚಿ, ರುಚಿ, ನಿಷ್ಕಳಂಕ, ನಿರ್ಮಲ

ಮತ್ತು ಶುಭ. ರೋಗಿ ಮತ್ತು ಜೆಟ್ಟಿಗಳಿಗೆಲ್ಲಾ ಅವಶ್ಯಕವಾದ ಮತ್ತು ಆರೋಗ್ಯಕರವಾದ ದಿವ್ಯ ಆಹಾರ. ಹಸಿದಿರುವ ಹಸುಳೆಗೆ ತಾಯಿ ಹಾಲಿನಂತೆ ಈ ಸುವಾರ್ತೆ, ಉತ್ಕಾಂಕ್ಷಿಸುವ ಆತ್ಮಕ್ಕೆ ಆನಂದಕಾರಿ. ಮಾನವ ಭಗವದ್ಗೀತೆ ಒಂದಕ್ಕೇ ಶರಣಾದರೆ ಆತ್ಮಜ್ಞಾನಕ್ಕೆ ಅಧಿಕಾರಿ ಯಾಗುತ್ತಾನೆ.

## ವಿಶ್ವ ಒಂದೇ ಕುಟುಂಬ – ಸನಾತನ ಸಂಸ್ಕೃತಿ

ಪ್ರಾಚೀನ ಕಾಲದಿಂದಲೂ ಮಾನವನಿಗೆ ಅಲ್ಲದೆ ಯಾವ ಜೀವಿಗೂ ಸಂಕಟ ಬೇಡ. ಸುಖ, ಶಾಂತಿ, ನೆಮ್ಮದಿ, ಆನಂದ ಬೇಕು ಸಂಕಟ ಪರಿಹಾರ ಮಾಡಿ, ನಿತ್ಯ ಸುಖವನ್ನು ಗಳಿಸುವ ಮಾರ್ಗವನ್ನು ಅರಿಯಲು ನಮ್ಮ ಋಷಿಗಳು ಸತತ ಪ್ರಯತ್ನ ನಡೆಸಿದ್ದಾರೆ. ಸಂಸಾರ, ಸಮಾಜ, ರಾಜ ಕೀಯ ವ್ಯವಸ್ಥೆಗಳು ಮತ್ತು ಮತದ ಆದರ್ಶಗಳು ಮಾನವನ ಸುಖ ಶಾಂತಿಗಾಗಿ ಅವರು ನಿರ್ಮಿಸಿದ ಕೊಡುಗೆಗಳು. ಈ ನಿಸ್ವಾರ್ಥಿಗಳು ತಮ್ಮ ಮುಂದಿನ ಪೀಳಿಗೆಯ ಸುಖಕ್ಕೆ ಶತಮಾನಗಳ ಸಂಶೋಧನೆ ನಿರ್ವಹಿಸಿದ್ದಾರೆ. ಭಾರತದ ಈ ವಿವೇಚನಾಪರರು ಪ್ರಾಚೀನ ಕಾಲ ದಿಂದ ನಿಂದೆ, ಭಯ ಮತ್ತು ಸ್ತೋತ್ರದ ಮೋಹವನ್ನು ತೊರೆದು ದಿಟ್ಟ ತನದಿಂದ ಸತ್ಯ ಮತ್ತು ಮಾನವ ಕಲ್ಯಾಣ ಚಿಂತನೆಯನ್ನು ನಡೆ- ಸುತ್ತಲೇ ಬಂದಿದ್ದಾರೆ. ಚೈತನ್ಯಾತ್ಮಕರು, ಸದ್ಗುಣರು ಮತ್ತು ಪರಿ ಶುದ್ಧತೆಯ ಭಾರತೀಯರು ವಿಶಾಲ ಭಾವನೆಯವರು. ಬಂದವರನ್ನೆಲ್ಲ ತುಂಬು ಹೃದಯದಿಂದ ಆಹ್ವಾನಿಸಿ, ಅವರ ಸಂಸ್ಕೃತಿ ಮತ್ತು ಮತ ಗಳನ್ನು ಗೌರವಿಸಿ, ಒಳ್ಳೆಯದನ್ನು ಸಮೀಕರಿಸಿಕೊಂಡು, ಸೋದರರಂತೆ ಸಮ್ಮಿಳಿತವಾಗಿ ಬಾಳಿರುವುದನ್ನು ಇತಿಹಾಸ ಸ್ಪಷ್ಟಪಡಿಸಿದೆ. ಇದು ಸನಾತನ ಸಂಸ್ಕೃತಿಯ ಹಿರಿಮೆ. ಆ ಮಹಾನುಭಾವರು ಸಾವಿರಾರು ವರ್ಷಗಳ ಕೆಳಗೆ ವಿಶ್ವವೆಲ್ಲಾ ಒಂದೇ ಕುಟುಂಬ ಎಂಬ ಸತ್ಯವನ್ನು ಘೋಷಿಸಿದರು. ಈ ಆಧುನಿಕ ಪ್ರಪಂಚದಲ್ಲಿ ಒಂದು ರಾಷ್ಟ್ರ ಇತರ ರಾಷ್ಟ್ರಗಳನ್ನು ಸಂಕಟದಲ್ಲಿ ಬಿಟ್ಟು, ಒಂಟಿಯಾಗಿ ಸುಖ-ಶಾಂತಿಯನ್ನು

ಅನುಭವಿಸುವುದು ಅಸಾಧ್ಯ ಎಂಬ ಅಂಶವನ್ನು ನೋಡುತ್ತಿದ್ದೇವೆ. ಹಾಗೆ ಒಬ್ಬ ವ್ಯಕ್ತಿ ಪರರ ಕಷ್ಟಗಳನ್ನು ನೋಡಿಕೊಂಡು ಸುಖ ಪಡುವುದು ಅಸಾಧ್ಯ. ಸಮಾಜ ವ್ಯಕ್ತಿಯಾದ ಮಾನವನು ನೆರೆ-ಹೊರೆಯವರಿಗೆ ಹಿತ ಬಯಸುವುದು ಸಮಂಜಸವೂ, ಪರಿಶುದ್ಧವೂ ಆದ ಒಂದು ಸುಗಮ ಮಾರ್ಗವಾಗಿದೆಯೆಂದು ಮನದಟ್ಟು ಮಾಡಿದ್ದಾರೆ.

## ಬ್ರಹ್ಮವಿದ್ಯೆ : ಧಾರ್ಮಿಕ ಬದುಕು

ಬೀಜದಲ್ಲಿ ಅಡಗಿರುವ ಮರದ ಒಂದು ಭಾಗ ಕಣ್ಣಿಗೆ ಕಾಣಿಸದೆ ಭೂಮಿಯೊಳಗೆ ಬೇರಾಗಿ ಬೆರೆತಿದೆ. ಮತ್ತೊಂದು ಭಾಗ ಕುಡಿಯಾಗಿ ಕಣ್ಮನಗಳನ್ನು ಸೆಳೆಯುತ್ತದೆ. ಮರ, ಹೂ, ಹಣ್ಣುಗಳ ಆರೋಗ್ಯಕ್ಕೆ ಸದ್ದು ಗದ್ದಲವಿಲ್ಲದ ಬೇರೇ ಜೀವಾಧಾರ. ಬೇರು ಶಕ್ತಿಯುತವಾಗಿದ್ದರೆ ಮೇಲ್ಭಾಗದ ಗಿಡ ಆಕರ್ಷಣೀಯವೂ, ಉಪಯುಕ್ತವೂ, ದೀರ್ಘಾಯುವು ಆಗಿ ರಂಜಿಸುವುದು. ಜಗದ ಏಳಿಗೆಗೆ ಬೇರೊಂದು ಹವ್ಯಾಸವಿಲ್ಲದೆ ದುಡಿಯುವ ನೇಗಿಲ ಯೋಗಿಗಳು ಅತ್ಯಾವಶ್ಯಕ. ವೈಬಲದಿಂದ ಕಾರ್ಖಾನೆಗಳಲ್ಲಿ ಹಗಲಿರುಳು ಯಂತ್ರಗಳನ್ನು ನಡೆಸುವ ಕಾರ್ಮಿಕರೂ ರಾಷ್ಟ್ರದ ಕಂಬಗಳು. ಆದರೆ ಈ ಯಂತ್ರಗಳು ಮಾನವನ ಹತೋಟಿಗೆ ಬಂದು, ಉಪಯುಕ್ತವಾಗಬೇಕಾದರೆ, ಅನೇಕ ಬುದ್ಧಿಜೀವಿಗಳು ಏಕಾಂತದಲ್ಲಿ ಮೌನವಾಗಿ ಜನಗಳ ಕಣ್ಣಿಗೆ ಬೀಳದೆ, ಹೊಗಳಿಕೆಗೆ ದಕ್ಕದೆ ನೂರಾರು ನಿರಾಸೆಗಳನ್ನು ಮತ್ತು ಸೋಲುಗಳನ್ನು ಎದುರಿಸಿ, ದುಡಿದಿರಲೇಬೇಕು. ಅದೇ ರೀತಿ, ಸೃಷ್ಟಿನಾಟಕದ ಆದಿಯಿಂದ ಮಾನವನನ್ನು ಮೂದಲಿಸುತ್ತಿರುವ, ಬಗೆಹರಿಯದ ಸಮಸ್ಯೆಗಳನ್ನು ಎದುರಿಸಲು ಸಂಗರಹಿತರಾಗಿ, ನಿರ್ಜನ ಪ್ರದೇಶಗಳಲ್ಲಿ ಕಠಿಣ ತಪಸ್ಸುಗಳನ್ನು ಮಾಡಿ, ಮಾನವ ಕಲ್ಯಾಣಕ್ಕಾಗಿ ಅನೇಕ ಮಹಾ ಪುರುಷರು ತ್ಯಾಗ ಮಾಡಿದ್ದಾರೆ.

ಸರ್ವರ ದುಃಖ ಪರಿಹಾರ ಮಾರ್ಗಕ್ಕೋಸ್ಕರ, ಚಕ್ರವರ್ತಿ ಪದವಿ ತ್ಯಾಗ ಮಾಡಿ, ತಪಸ್ವಿಯಾದ ಬುದ್ಧ, ಉನ್ನತ ಉದಾಹರಣೆ. ತಮ್ಮ ಕಾರುಣ್ಯದ

ಸುಖ ಸಂತೋಷಗಳನ್ನು ತ್ಯಾಗ ಮಾಡಿ, ಸನ್ಯಾಸ ಸ್ವೀಕರಿಸಿ, ಲೋಕ ಕಲ್ಯಾಣ ಎಸಗಿದ ವೀರ ಸನ್ಯಾಸಿ ಸ್ವಾಮಿ ವಿವೇಕಾನಂದರು, ಮತ್ತೊಬ್ಬ ಉನ್ನತ ಭಾರತೀಯ, ವಿಶಿಷ್ಟ ಮಾನವ. ಇಪ್ಪತ್ತನೇ ಶತಮಾನದ ಅವತಾರ ಪುರುಷರಾದ ಮಹಾತ್ಮ ಗಾಂಧಿ ತಮ್ಮ ತ್ಯಾಗದಿಂದ, ನಿರಂತರ ದುಡಿಮೆಯಿಂದ ತನ್ನ ರಾಷ್ಟ್ರವನ್ನು ಶತಮಾನಗಳ ದಾಸ್ಯದಿಂದ ಬಿಡುಗಡೆ ಮಾಡಿ, ಪ್ರಪಂಚದ ಮೂಲೆ-ಮೂಲೆಯ ಮಾನವಕುಲದ ಸ್ವಾತಂತ್ರ್ಯಕ್ಕೆ ಬೀಜ ಬಿತ್ತಿದ ಪೂಜ್ಯ. ಅಗ್ರಗಣ್ಯ. ಇಂಥ ತ್ಯಾಗಿಗಳ, ವಿಶಾಲ ವಿಶ್ವ ಹೃದಯದವರ ಸರಣಿಯಿಂದಲೇ ಭಾರತ ಬದುಕಿರುವುದು ಮತ್ತು ಮಾನವಕುಲ ಕ್ಷೀಣಹೊಂದದೇ ಮುಂದುವರೆಯುತ್ತಿರುವುದು.

ವಿಷಯ ಲಂಪಟತೆ, ಪ್ರಾಣಿಗಳಿಗೆ ಹೋಲುವ ಕೀಳುದರ್ಜೆಯ ನರರ ಕುರುಹು. ಪ್ರತೀ ಸಮಾಜದಲ್ಲೂ ಭೋಗಗಳನ್ನು ವರ್ಜಿಸಿದ ಅಪರೂಪ ವ್ಯಕ್ತಿಗಳನ್ನು ಇತಿಹಾಸ ಎತ್ತಿ ತೋರಿಸಿದೆ. ಇಂಥ ಅಪರೂಪ ವ್ಯಕ್ತಿಗಳ ಏರಿಕೆಯೇ ರಾಷ್ಟ್ರಾಭಿವೃದ್ಧಿಯ ಮೂಲ. ಅಧ್ಯಾತ್ಮಿಕ ಆದರ್ಶವೇ ಪುರೋಭಿವೃದ್ಧಿಯ ಪ್ರಮುಖ ಪ್ರೇರಕ. ಧಾರ್ಮಿಕ ವಿದ್ವತ್ತಿನ ವಿಚಾರ ಶೀಲತೆ, ಮನಸ್ಸನ್ನು ಹುರಿದುಂಬಿಸಿ ಶ್ರೇಷ್ಠತರಹದ ಆನಂದವನ್ನು ಕೊಡುತ್ತದೆ. ಅಲ್ಲದೆ ಶ್ರೇಷ್ಠ ಮಾನವನನ್ನಾಗಿ ಪರಿವರ್ತಿಸಿ, ಉಪ ಯುಕ್ತವೂ, ಉನ್ನತವೂ ಆದ ವಸ್ತುಗಳನ್ನು ಪಡೆಯುವ ಅರ್ಹತೆ ಕೊಟ್ಟು, ಪರರಿಗೂ ಸುಖ ಶಾಂತಿಯನ್ನು ಕೊಡುವ ಶಕ್ತಿಯನ್ನು ನೀಡುತ್ತದೆ. ಈ ಅಪರೂಪ ಮತ್ತು ಅಸಾಧಾರಣವಾದ ವ್ಯಕ್ತಿಗಳು ಪರರ ಸುಖ ಶಾಂತಿಗಾಗಿ,ಸ್ವಪ್ರೇರಣೆಯಿಂದ ಧಾರ್ಮಿಕವಾಗಿ ಬಾಳಿದ್ದಾರೆ. ವ್ಯಕ್ತಿ, ಸಂಸಾರ, ರಾಷ್ಟ್ರ, ಅಂತರರಾಷ್ಟ್ರ ಮತ್ತು ಸಂಪೂರ್ಣ ವಿಶ್ವದ ಶಾಂತಿಗಾಗಿ ಹಂಬಲಿಸಿದ್ದಾರೆ. ಈ ತ್ಯಾಗ ಈಗಲೂ ಈ ಪುಣ್ಯಭೂಮಿ ಯಲ್ಲಿ ನಡೆಯುತ್ತಲೇ ಇದೆ.

## ಸ್ಥಿರ ಮನಸ್ಸು — ಯೋಗಿ

ಪರಹಿತ ಬಯಕೆ ಮನಸ್ಸನ್ನು ಶುದ್ಧ ಮಾಡುತ್ತದೆ. ಶುಭ ಮನಸ್ಸು

ಶಾಂತಿಯನ್ನು ಸ್ಥಿರಗೊಳಿಸಿ ದುಃಖವನ್ನು ದೂರ ಮಾಡುತ್ತದೆ. ಮನಸ್ಸೇ ಮಾನವ. ಮನಸ್ಸು ಮತ್ತು ಬುದ್ಧಿಯು ಅನ್ಯೋನ್ಯತೆ ಸಡಿಲವಾದಾಗ ವ್ಯಕ್ತಿಯು ಆ ಂ ತ ರಿ ಕ ಗೊಂದಲ ಉಲ್ಬಣವಾಗುತ್ತದೆ. ಪಂಚೇಂದ್ರಿಯಗಳ ಮೂಲಕ ಬರುವ ಅಸಂಖ್ಯಾತ ಪ್ರಚೋದನೆಗಳನ್ನು ಬುದ್ಧಿ ಶೋಧಿಸಿದರೆ ಮನಸ್ಸು ನಿರ್ಮಲವಾಗುತ್ತದೆ. ಶಕ್ತಿಯುತವಾಗುತ್ತದೆ. ಈ ಶುದ್ಧೀಕರಿಸುವ ಕರ್ತವ್ಯದಲ್ಲಿ ಬುದ್ಧಿ ಸೋತಾಗ ಮನಸ್ಸು ಮಲಿನವಾಗುತ್ತದೆ. ಬುದ್ಧಿಯು ಮಾರ್ಗದರ್ಶನದಲ್ಲಿ ಸಂಪೂರ್ಣ ಶಿಸ್ತಿಗೊಳಪಟ್ಟ ಮನಸ್ಸಿನ ಕಾರ್ಯ ನಿರ್ವಹಣೆಯೇ ಯೋಗ. ಬಹುತೇಕ ಮಂದಿ ಮಹತ್ ಸಾಧನವಾದ ಬುದ್ಧಿಯನ್ನು ತಮ್ಮ ಶ್ರೇಯಸ್ಸಿಗೆ ಉಪಯೋಗಿಸದೆ ಕೀಳುತರಹದ ಬಯಕೆಗೆ ಬದಲಾಯಿಸಿ ತಮ್ಮ ನಾಶಕ್ಕೆ ತಾವೇ ಕಾರಣರಾಗುತ್ತಾರೆ. ಛಿದ್ರತೆಯ ಮನಸ್ಸು ದುರ್ಬಲಗೊಂಡು ಅನೇಕ ಮಾನಸಿಕ ರೋಗಗಳಿಗೆ ಬಲಿಯಾಗುತ್ತದೆ. ಮಾನಸಿಕ ಉದ್ವೇಗಗಳನ್ನು ನಿಗ್ರಹಿಸಿದ ವ್ಯಕ್ತಿ ತನ್ನ ಎಲ್ಲಾ ಕ್ಷೇತ್ರಗಳಲ್ಲೂ ಜಯ ಪಡೆದು ಕೀರ್ತಿ ಪಡೆಯುತ್ತಾನೆ. ಶರೀರಕ್ಕೂ ಮನಸ್ಸಿಗೂ ಪರಸ್ಪರ ಸಂಬಂಧವಿದೆ. ದೃಢ ದೇಹ ಸ್ಥಿರಮನಸ್ಸಿನ ಮೂತೆ - ಅಚಂಚಲದ ಮನಸ್ಸನ್ನು ದೃಢದೇಹ ಸೃಷ್ಟಿಸುತ್ತದೆ. ಈ ದ್ವಂದ್ವ ಶ್ರೇಷ್ಠತೆಗಳು ಪ್ರಾಮಾಣಿಕತೆ, ಖಂಡಿತವಾದತ್ವ, ನಿಷ್ಕಪಟತ್ವ ಮತ್ತು ಸರಳತೆಗಳ ಮೂಲ. ಆ ಅಮೂಲ್ಯ ಗುಣಗಳನ್ನು ಗಳಿಸಿದವನೇ ಯೋಗಿ. ಯೋಗಿಗಳೇ ವಿಶ್ವ ನಿರ್ಮಾಪಕರು. ಇಂಥ ಮಹಾನುಭಾವರೇ ಎಲ್ಲಾ ಜವಾಬ್ದಾರಿಗಳನ್ನು ಯಶಸ್ವಿಯಾಗಿ ನಿರ್ವಹಿಸಲು ಶಕ್ತರು. ಈ ಸರ್ವಶ್ರೇಷ್ಠತೆಗೆ ಮೂಲ, ಇಂದ್ರಿಯ ನಿಗ್ರಹ. ಇಂದ್ರಿಯ ಹತೋಟಿಗೊಳಿಸಿದ ಮಹಾನುಭಾವರೇ ಲೋಕ ಕಲ್ಯಾಣದಲ್ಲಿ ಮಗ್ನರಾಗಿ ಕೀರ್ತಿ ಬಯಸದೆ ವಿಶ್ವ ವ್ಯಕ್ತಿಗಳಾಗಿ ರಂಜಿಸುತ್ತಾರೆ ಶ್ಲಾಘ್ಯ ಅಥವ ಕುಂದಿಲ್ಲದ ಜೀವನ ನಡೆಸುವವನಿಗೆ ಕೀರ್ತಿ ಜೋಡಿಯಾಗಿರುತ್ತದೆ. ಮನಸ್ಸನ್ನು ಪ ಳ ಗಿ ಸಿ ಹ ದ ಮಾ ಡಿ ಶಿಸ್ತಿಗೊಳಪಡಿಸುವುದು ಮುಖ್ಯ. ಶಿಕ್ಷಣೆಗೊಳಪಟ್ಟ ಮನಸ್ಸು, ಜ್ಞಾನ, ಪ್ರ ತಿ ಭಾ ಶ ಕ್ತಿ ಮುಂತಾದ ಶ್ರೇಷ್ಠ ಮಾನಸಿಕ ಸಾಧನ ಸಂಪತ್ತನ್ನು ವೃದ್ಧಿ ಮಾಡು-

ತ್ತದೆ. ಪರಿಪೂರ್ಣ ಮತ್ತು ಶೋಭಾಯಮಾನವಾದ ಹೊಸ ಸಾಧ್ಯತೆ ಗಳನ್ನು ಕೈಗೂಡಿಸಿಕೊಳ್ಳಲು ಉತ್ತೇಜಿಸುತ್ತದೆ ಒಂದು ಹೊಸದೃಷ್ಟಿ ಸೃಷ್ಟಿಸಿ, ಸೇವೆ, ತ್ಯಾಗ ಮತ್ತು ನಿಸ್ವಾರ್ಥ ಪ್ರೇಮದ ದೀಪವನ್ನು ಬೆಳ ಗಿಸುತ್ತದೆ. ಒತ್ತಡಕ್ಕೊಳಪಟ್ಟ ಗಾಳಿ, ಬಂಡೆಯನ್ನು ಕೊರೆಯುವ ಶಕ್ತಿ ಯನ್ನು ಪಡೆಯುವ ಹಾಗೆ, ಶಿಸ್ತಿನ ಮನಸ್ಸು ಅಗಾಧವಾದ ಮತ್ತು ಅದ್ಭುತವಾದ ಶಕ್ತಿಯನ್ನು ಗಳಿಸುತ್ತದೆ ಇಂಥ ಶುದ್ಧ ಮತ್ತು ಶಕ್ತಿ ದಾಯಕ ಮನಸ್ಸು ಸರ್ವರ ಸ್ವಭಾವ ಸಿದ್ಧವಾದ ಕೊಡುಗೆ.

# ಬ್ರಹ್ಮವಿದ್ಯೆ

ಮನೋನಿಗ್ರಹ ಅಥವ ಸಂಯಮದಿಂದ ತುಂಬಿದ ವ್ಯಕ್ತಿಗೆ, ಚೈತನ್ಯ ತುಂಬಿದ ದಿವ್ಯ ಭಾವನೆಗಳು ಹೊಳೆಯುವುವು. ಆಲೋಚನಾ ಪರ ರನ್ನಾಗಿ ಪ್ರಚೋದಿಸಿ, ಆತ್ಮ ಪರೀಕ್ಷೆ ಮಾಡಿಕೊಳ್ಳುವ ಶಕ್ತಿಯನ್ನು ಅನುಗ್ರಹಿಸುತ್ತದೆ. ಆಗ ಅವನಿಗೆ ಸರ್ವಜೀವಿಯಲ್ಲೂ ಇರುವ ಆತ್ಮವು ಒಂದೇ ಎಂಬ ಭಾವ ಮನದಟ್ಟಾಗುತ್ತದೆ. ಇಂಥ ಬದುಕು ಮತ್ತು ಅದರ ಅನುಭವವೇ ಬ್ರಹ್ಮವಿದ್ಯೆ. ಭಗವಂತನ ಸಮ್ಮುಖವನ್ನು ಅಂತ ರಿಕವಾಗಿ ಅನುಭವಿಸುವಂತೆ, ಮನಸ್ಸನ್ನು ನಿಗ್ರಹಿಸಿಕೊಳ್ಳುವ ಕಠಿಣ ಮಾನಸಿಕ ಮತ್ತು ನೈತಿಕ ಸ್ವಪ್ರೇರಣೆಯ ಶಿಕ್ಷಣವೇ ಬ್ರಹ್ಮವಿದ್ಯೆ. ಇದನ್ನು ಆತ್ಮಜ್ಞಾನ, ಶಿವಜ್ಞಾನ, ಆತ್ಮಬೋಧೆ, ಪರವಿದ್ಯೆ, ನಿರ್ವಿಕಲ್ಪ ಸಮಾಧಿ, ನಿರ್ವಾಣ, ಸ್ವರ್ಗ ಸಾಮ್ರಾಜ್ಯ, ಅಲ್ಲಾ ಎಂಬ ನಾನಾ ನಾಮಾಂಕಿತಗಳಿಂದ ತತ್ವಜ್ಞರು ಕರೆದಿದ್ದಾರೆ. ಇದೇ ಸರ್ವಶ್ರೇಷ್ಠ ಕಲಾ ವಿಜ್ಞಾನ. ವಿಜ್ಞಾನ ಶಾಸ್ತ್ರಗಳೆಲ್ಲಾ ಅರ್ಥಂಬರ್ಥ ತಿಳುವಳಿಕೆ ಯನ್ನು ಮಾತ್ರ ಕೊಡಬಲ್ಲವು. ಬ್ರಹ್ಮವಿದ್ಯೆ ಅಖಂಡ ಪ್ರಜ್ಞೆ ಕೊಡುವ ಶಾಸ್ತ್ರ. "ಹೊಟ್ಟೆ ಹೊರೆದುಕೊಳ್ಳುವ ಕಲಾ ಕೌಶಲ್ಯ ಮತ್ತು ಕೈ ಕಲೆ ಗಳು ವಿಜ್ಞಾನವಾದರೆ, ಪ್ರಾಪಂಚಿಕ ದುಃಖದಿಂದ ವಿಮೋಚನೆ ವಿವರಿ- ಸುವ ಮಾರ್ಗ ನಿಜವಾದ ವಿಜ್ಞಾನ ಅಲ್ಲವೇ"? ನಾಗಾರ್ಜುನ.

# ಮಾನವ ಕುಲ ಕಲ್ಯಾಣ

ಈ ಯಥಾರ್ಥ ಸ್ವರೂಪದ ಬ್ರಹ್ಮವಿದ್ಯೆ ಎಲ್ಲಾ ಪುರುಷ ಪ್ರಯತ್ನ ಮತ್ತು ಸಿದ್ಧಿಗಳಿಗೆ ತಳಹದಿ. ಇದೊಂದು ದೊಡ್ಡ ವರ ಮತ್ತು ಪ್ರಸಾದ. ಈ ಕೊಡುಗೆಯನ್ನು ಪಡೆದ ವ್ಯಕ್ತಿ ಜೀವನಪರ್ಯಂತ ಶಕ್ತಿಯುತನಾಗಿ ಲವಲವಿಕೆಯಿಂದ ಮತ್ತು ದಕ್ಷತೆಯಿಂದ ಲೋಕ ಕಲ್ಯಾಣ ಕಾರ್ಯಗಳಲ್ಲಿ ಮಗ್ನನಾಗಿರುತ್ತಾನೆ. ಇವನೇ ಯೋಗಿ. ಅಂದರೆ ದಕ್ಷತೆಯ ಜಾಣ್ಮೆಯ ಸಮಸ್ಥಿತಿಯನ್ನು ಕಲಕದ ಮನಸ್ಸನ್ನು ನಿರ್ಮಾಣ ಮಾಡಿ ಕೊಂಡಿರುವವನು. ಆತಂಕ, ವ್ಯಾಕುಲತೆ, ತಲ್ಲಣ, ಕಾತುರತೆ, ಸಂಕಟ ಮರಣಯಾತನೆ, ಮನೋಭಾರ, ಯೋಚನೆ, ಚಿಂತೆ, ಕಿರುಕುಳ ಗೋಳು ಇವು ಅಸಹ್ಯವಾದವುಗಳು ಬ್ರಹ್ಮವಿದ್ಯೆ ಜಿಗುಪ್ಸೆಕಾರಕವಾದ ಈ ಅಂಶಗಳ ಮೂಲ ಏನು ಎಂದು ವಿಭಜನೆ ಮಾಡಲರ್ಹವಾದ, ಶಕ್ತಿ-ಯುತ ಮನಸ್ಸನ್ನು ನಿರ್ಮಿಸುತ್ತದೆ. ಅವುಗಳ ಸಂಕೋಲೆಯನ್ನು ಮುರಿಯುವ ಜ್ಞಾನ ಮತ್ತು ಶಕ್ತಿಯನ್ನು ಅನುಗ್ರಹಿಸುತ್ತದೆ. ಅತಿ ಭೋಗ, ಅಧಿಕಾರ, ಅಂತಸ್ತುಗಳ ಆಸೆ-ಆಕಾಂಕ್ಷೆಯೇ ದುಃಖಕ್ಕೆ ಮೂಲ ವೆಂಬ ತತ್ವವನ್ನು ಮನದಟ್ಟು ಮಾಡಿಸಿ, ಪರರ ಕಷ್ಟಕ್ಕೆ ಕರಗುವ ಮನೋಭಾವವನ್ನು ಸೃಷ್ಟಿಸುತ್ತದೆ. ನೇರ ದಾರಿ ಬಿಟ್ಟು ಅಡ್ಡದಾರಿ ಹಿಡಿಯುವುದೇ ಎಲ್ಲಾ ನೋವಿನ ಮೂಲ. ಸ್ವಚ್ಛ ಜೀವನವೇ ಸಂಕಟಗಳ ಸಂಹಾರಿ. ಬೇಗುದಿ, ಬಯಕೆಯ ಬೆನ್ನು ಹತ್ತುತ್ತದೆ. ಅಧಿಕಾಧಿಕವಾದ ಆಹ್ಲಾದ, ಅಧಿಕಾರ ಮತ್ತು ಅಂತಸ್ತುಗಳ ಹಂಬಲವೇ ಮಾನವನ ಸಂಕಟಗಳ ಮೂಲ. ಪರರ ದುಃಖ ಪರಿಹಾರ ಮತ್ತು ನೈತಿಕ ಮೌಲ್ಯಗಳ ಉನ್ನತಿಗಾಗಿ ವ್ಯಥೆ ಪಡುವವನೇ ಸರ್ವ ಶ್ರೇಷ್ಠ ಮಾನವ.

ಬುದ್ಧ ಸಾರಿದ : ನಮ್ಮ ದುಃಖವೆಲ್ಲಾ ನಮ್ಮ ದುರಾಸೆಯ ಫಲ. ದುರಾಸೆ ನಿರ್ಮೂಲ ಸುಖಕ್ಕೆ ದಾರಿ. ಬೈಗುಳ, ಹಠಮಾರಿತನ, ಹಗೆ ತನ, ಹಿಂಸೆ, ಕೋಪ, ಕಳವು, ಹಾದರ, ಸುಳ್ಳು, ಜರಿಯುವುದು,

ಕಾಡುಹರಟೆ, ಪರಸ್ತ್ರೀನ ಆಸೆ, ತನ್ನ ಹೊಗಳಿಕೆ, ಪರರ ತೆಗಳಿಕೆ ಇವೇ ನರಳಾಟಗಳ ನಾಭಿ.

ಜ್ಞಾನ, ತ್ಯಾಗ, ಸೇವೆ, ಸಾಧನೆ, ಸಂಪಾದನೆಗಳು ಸುಖಕ್ಕೆ ದಾರಿ. ಆಹಾರ, ಹವ್ಯಾಸ, ನಿದ್ದೆ ಇವುಗಳ ಅಡಕ ಅರಿತವನು ಬಾಧೆಗಳಿಂದ ದೂರ. ನೋವು, ಶಿಕ್ಷೆ, ವ್ಯಾಧಿ ಮತ್ತು ಸೋಲುಗಳು ಸ್ವಯಂಕೃತ. ಹೊಟ್ಟೆಬಾಕತನ, ಸ್ವಚ್ಛಂಧತೆ ಮತ್ತು ಇತರೇ ಅತಿಕ್ರಮ ಆಸೆಗಳು ದೈಹಿಕಬೇನೆಗಳ ಜನನಸ್ಥಾನ. ಇವುಗಳು ದಂಡ ತೆರಸದೇ ಬಿಡವು. ಸಾಂಪ್ರದಾಯಿಕ ಪದ್ಧತಿಗಳ ಅತಿಕ್ರಮಣವೇ ಮಾನಸಿಕ ವೇದನೆಗೆ ಕಾರಣ.

# ವಿಜ್ಞಾನದ ಮತ

ವಿಜ್ಞಾನ ಶಾಸ್ತ್ರ ಸರ್ವವ್ಯಾಪಕವಾಗಿದ್ದರೂ ಜೀವಿಯ ಆಂತರಿಕದ ಅಪಾರ ಅವಯವಗಳ ವಿಚಾರ ಮಾನವನ ಬುದ್ಧಿಗೆ ನಿಲುಕಿಲ್ಲ ರಾಸಾಯನಿಕ, ಭೌತವಸ್ತುವಿನ ಸಣ್ಣ ಸಣ್ಣ ಕಣಗಳು ಹೇಗೆ ಜೀವಕಣಗಳ ತಾತ್ಕಾಲಿಕ ಮತ್ತು ಜಟಿಲ ಸ್ವರೂಪ ಅವಯವಗಳನ್ನು ನಿರ್ಮಾಣ ಮಾಡುತ್ತಿವೆ ? ಒಂದು ಅತೀ ಸೂಕ್ಷ್ಮಗರ್ಭದ ಅಂಡಾಣು ಹೇಗೆ ವ್ಯಕ್ತಿಯ ಅನುವಂಶೀಯ ಗುಣಗಳನ್ನು ಪ್ರದರ್ಶಿಸುತ್ತವೆ ? ಜೀವಿಯ ಜಾಗ್ರತಾವಸ್ಥೆಗೂ, ಮೆದುಳಿಗೂ ಹೇಗೆ ಸಂಬಂಧವನ್ನು ಕಲ್ಪಿಸಿದೆ ? ಭಾವ ಪ್ರೇಕ್ಷಣೆಗೆ (ದೂರದರ್ಶನ) ದೇಹದ ಯಾವ ಶಕ್ತಿ ಕಾರಣ? ಜಯ, ಅಪಜಯ, ಸಂತಸ, ಸಂಕಟ ಇವುಗಳ ಅರಿವು ಯಾವ ಅಂಶಗಳಿಂದ ಲಭ್ಯ? ಜೀವಿಗಳ ಆಂತರ್ಯಕ್ಕೆ ಸಂಬಂಧಪಟ್ಟ ಇಂಥ ಸಾವಿರಾರು ಸಮಸ್ಯೆಗಳು ವಿಜ್ಞಾನದ ದೃಷ್ಟಿವ್ಯಾಪ್ತಿಗೆ ದಕ್ಕಿಲ್ಲ.

ಈ ವಿಶಾಲ ರಾಷ್ಟ್ರದ ಐಕ್ಯತೆಗೆ ಆತ್ಮಜ್ಞಾನವೇ ಮೂಲ. ಮಾನವ ಕುಲದ ಕಲ್ಯಾಣಕ್ಕೆ ತಳಹದಿ. ಮಾನವ ಅಂತರಂಗದ ಸತ್ಯಶೋಧನೆ

ಧರ್ಮವಾದರೆ ಭೌತಿಕ ಸತ್ಯಶೋಧನೆ ವಿಜ್ಞಾನ. ವಿಜ್ಞಾನಿ ಆಧುನಿಕ ಪ್ರಪಂಚದ ಶಿಲ್ಪಿಯಾದರೂ ಅವನ ಸವಿಸ್ತಾರದ ಅನುಭವಕ್ಕೆ ಧಾರ್ಮಿಕ ಬೆರೆಯದೆ ಸರ್ವವೂ ತಲೆಕೆಳಗಾಗಿದೆ. ಧಾರ್ಮಿಕ ಬಾಕಿ ಎಲ್ಲಾ ಸಂಪತ್ತುಗಳ ಗಾಡಿಯನ್ನು ಎಳೆಯುವ ತೇಜಸ್ವಿಯಾದ ಕುದುರೆ. ಧರ್ಮದ ಮಾರ್ಗದರ್ಶನವಿಲ್ಲದಿದ್ದಾಗಲೇ ಭ್ರಷ್ಟತ್ವ ಆವರಿಸುವುದು. ಆತ್ಮಜ್ಞಾನರಹಿತರಿಗೆ ಅಧಿಕಾರ ಸೂತ್ರ ಸಂದಾಗ ಗುಲಾಮಿ ಮನೋಭಾವ ಹೊಂದಿ, ಅವರು ಮುಟ್ಟಿದ್ದೆಲ್ಲಾ ಮಲಿನವಾಗಿ, ಮೂಸಿದ್ದೆಲ್ಲಾ ನಾತ ಹುಟ್ಟಿ, ದೃಷ್ಟಿಯೆಲ್ಲಾ ಲೂಟಿ ಮತ್ತು ಭ್ರಷ್ಟತೆಯಿಂದ ಕೂಡಿ, ಶ್ವಾಸಕಟ್ಟಿದ ವಾತಾವರಣ ನಿರ್ಮಿಸಲ್ಪಡುತ್ತದೆ.

## ಆತ್ಮಜ್ಞಾನದ ವಿಜ್ಞಾನಿ

ಮಾನವ ವಿಜ್ಞಾನ ಅತೀ ಕ್ಲಿಷ್ಟವಾದುದು. ಮನಸ್ಸು ಪ್ರಯಾಸದ ಸಮಸ್ಯೆಗಳಿಂದ ತಪ್ಪಿಸಿಕೊಂಡು ಉಲ್ಲಾಸದ ವಿಚಾರಗಳನ್ನು ಅಪ್ಪಿಕೊಳ್ಳುತ್ತದೆ. ಮಾನವ ತನ್ನನ್ನು ಹೊರತುಪಡಿಸಿ, ಉಳಿದೆಲ್ಲಾ ಭೌತಿಕ ವಸ್ತುಗಳನ್ನು ಮಾರ್ಪಡಿಸಿದ್ದಾನೆ ತನ್ನ ಕಾಲದ ಅದೃಷ್ಟವನ್ನು ರೂಪಿಸಲು, ವಿಜ್ಞಾನದ ವಿಪುಲ ವೀರ್ಯವನ್ನು ವಿನಿಯೋಗಿಸಿಕೊಳ್ಳದೆ ಸ್ವಾರ್ಥಕ್ಕಾಗಿ ವ್ಯರ್ಥಮಾಡಿದ್ದಾನೆ ವೈಜ್ಞಾನ ನಿರೂಪಣೆಗಳೆಲ್ಲಾ ಲಾಭಕರ ಮತ್ತು ಸ್ವಾರ್ಥ ವ್ಯವಸ್ಥೆಗೆ ಅಡಿಯಾಳಾಗಿವೆ. ದೇಹಶಕ್ತಿ ಶಿಸ್ತು, ಆರೋಗ್ಯ ಮತ್ತು ಮನಃಶಾಂತಿಗೆ ಮೂಲವಾದ ದುಡಿಮೆಯನ್ನು ನಿರಾಯಾಸ ಮಾಡಿಕೊಂಡು, ನಿರಂತರದ ಅಂಗವಿಕಲತೆ, ದೇಹ ರಚನಾ ವಿಕಾರತೆ ಹೊಂದಿ, ವಾಸಿ ಮಾಡಲಸಾಧ್ಯವಾದ ರೋಗದಿಂದ ನರಳುತ್ತಿದ್ದಾನೆ ಯಂತ್ರ ನಾಗರೀಕತೆ ಮಾನವನನ್ನು ಒಂದು ಯಂತ್ರವನ್ನಾಗಿ ನಿರ್ಮಾಣಿಸುತ್ತಿದೆ. ಸೌಂದರ್ಯವನ್ನು ರಾಸಾಯನಿಕ ಮತ್ತು ಕೃತಕವಸ್ತುಗಳಿಂದ ಬಳಸಿ ಸಹಜ ಹುಟ್ಟನ್ನು ಹಾಳು ಮಾಡಿಕೊಳ್ಳುತ್ತಿದ್ದಾನೆ ಎಲ್ಲದರಲ್ಲೂ ವೈಪರೀತ್ಯ ತಾಂಡವವಾಡುತ್ತಿದೆ. ಸಹಜವಾದ ಪ್ರಕೃತಿ ಆರೋಗ್ಯಮತ್ತು ಸೌಂದರ್ಯಗಳಿಗೆ ಪರತ್ತುಸಂಯುಮ ಕಾಯುಕ

ಸರಳ ಮತ್ತು ನೇರ ಜೀವನ. ಸರಳತೆಯೇ ದಕ್ಷತೆ ಮತ್ತು ಆಲಸ್ಯ ಮತ್ತು ಅನಾಯಾಸದ ಪ್ರವೃತ್ತಿಗಳು ಸರ್ವ ಅನಾಹುತಗಳಿಗೂ ಆದಿ. ಸಕ್ಕರೆ ಖಾಯಿಲೆ ವಿಶ್ವದಾದ್ಯಂತ ಬಹು ಜನರನ್ನು ಬಲಿ ತೆಗೆದು ಕೊಳ್ಳುತ್ತಿದೆ. ಮೂಲ ಕಾರಣ, ನಾಲಿಗೆಯ ಮೇಲೆ ಹತೋಟಿ ತಪ್ಪಿ ರುವುದು.ಹಂಚುಣ್ಣದೆ ಸ್ವಾರ್ಥತೆಯಿಂದ ಕೊಂಡುಕೊಂಡ ಬೇನೆ ಇದು. ಇದನ್ನು ಆಹಾರ-ವಿಹಾರ ಕಾಯುಕಗಳ ಶಿಸ್ತಿನಿಂದ ಗುಣಪಡಿಸಿಕೊಂಡು ನವ ಮಾನವನಾಗಬಹುದು. ಇನ್‌ಸುಲಿನ್ ಎಂಬ ಕೃತಕ ಔಷಧಿ ಬಿಟ್ಟು ಬೇರೇನೂ ಇಲ್ಲವೆಂಬ ಮಿಥ್ಯ ನಂಬಿಕೆ ಸಾಚಿಕೆಗೇಡು.

ವಿಜ್ಞಾನಯುಗ ಸಹಜವಾದ ಸುಗುಣಗಳನ್ನು ಸುಪ್ತಾವಸ್ತೆಗೆ ನೂಕಿ, ಸರ್ವವನ್ನೂ ತಲೆಕೆಳಗು ಮಾಡಿದೆ. ಹಣ ಒಂದು ಬಿಟ್ಟು ಬಾಕಿ ಎಲ್ಲದರ ವಿಚಾರದಲ್ಲೂ ಉಪೇಕ್ಷೆ ನೈತಿಕ ಮಟ್ಟದ ಮಲಿನತೆಯ ಶುಭ್ರತೆಗೆ ಪ್ರಯತ್ನ ಕಿಂಚಿತ್ತೂ ಇಲ್ಲ. ಭ್ರಷ್ಟತೆ, ಅನಾಯಾಸದಿಂದ ಹಣ ಅಪಹರಣದ ಅಭ್ಯಾಸವೇ ಆರ್ಥಿಕ ಅನಾಹುತಗಳ ಮೂಲ. ವಿಶ್ವದಾದ್ಯಂತ ಅರ್ಥಶಾಸ್ತ್ರಜ್ಞರು, ಮಿಥ್ಯ ಭರವಸೆಗಳನ್ನೇ ಕೊಡು-ತ್ತಿದ್ದಾರೆ. ಆರ್ಥಿಕ ಕ್ಷಯದ ಕಾರ್ಯಗತಿ ನಿರಂತರವಾದುದು. ಇದಕ್ಕೆ ಕಡಿವಾಣವೇ ಇಲ್ಲ. ಭ್ರಷ್ಟ ರಾಜಕೀಯಸ್ಥರ ಅಜ್ಞಾನ, ಭ್ರಾಂತು ಮತ್ತು ಮೋಸಗಾರಿಕೆಗಳನ್ನು ಜನ ಅರ್ಥಮಾಡಿಕೊಳ್ಳಲು ಅಸಮರ್ಥ ರಾಗಿದ್ದಾರೆ. ನಡುಹಗಲಿನಲ್ಲಿಯೇ ನಿರ್ಭಯವಾಗಿ ಬ್ಯಾಂಕುಗಳ ದರೋಡೆ ನಡೆಯುತ್ತಿದೆ. ಒಂದೇ ನಿಮಿಷದಲ್ಲಿ ನೂರಾರು ನಿರ್ದೋಷಿಗಳನ್ನು ಗುಂಡುಗಳಿಂದ ನಿರ್ನಾಮ ಮಾಡುತ್ತಿದ್ದಾರೆ. ಖೂನಿ, ದರೋಡೆ, ಭ್ರಷ್ಟತೆ ಮತ್ತು ಬುದ್ಧಿ ಭ್ರಮಣೆ ಪರ್ಯಾಯ ಸ್ವಭಾವಗಳು. ಇದರ ತಡೆಗಾಗಿ ಕೋಟಿಗಟ್ಟಲೆ ಹಣ ಹಾಳಾಗುತ್ತಿದೆ. ಜೈಲುಗಳು, ಹುಚ್ಚರ ಆಸ್ಪತ್ರೆಗಳು ಭರ್ತಿಯಾಗಿವೆ. ಕೃತಕ ವೈದ್ಯರ ನಿರ್ಮಾಣಕ್ಕೆ ನೂರಾರು ಕೋಟಿ ಖರ್ಚಾಗುತ್ತಿವೆ. ಸರ್ವರು ಸಾಲದ ಹಣದಿಂದ ತಮ್ಮ ಜೇಬು ಗಳನ್ನು ಭರ್ತಿಮಾಡಿಕೊಳ್ಳಲು ಪೈಪೋಟಿ ಮಾಡುತ್ತಿದ್ದಾರೆ. ರಾಷ್ಟ್ರದ ಹಡಗಿನ ತಳ ತೂತು ಮಾಡಿ, ದಡ ಸೇರುವ ಪ್ರಯತ್ನ ಇದು. ರಾಷ್ಟ್ರದ

ಆಡಳಿತದ ವೆಚ್ಚ ಗಗನಕ್ಕೇರುತ್ತಿದೆ. ಅಗ್ರಗಣ್ಯರ ದರ್ಬಾರು, ಆಸೆ, ಮೋಸ, ಸ್ವಜನ ವ್ಯಾಮೋಹ, ಖಜಾನೆಯನ್ನು ಬರಿದು ಮಾಡಿದೆ. ನಿಸ್ವಾರ್ಥಿಗಳ, ನಿಜದೇಶಪ್ರೇಮಿಗಳ ನಿರ್ಧಾರಗಳು ನಿರರ್ಥಕ. ಐಹಿಕ ಭೋಗಗಳನ್ನು ಕಲ್ಪಿಸಿರುವ ವಿಜ್ಞಾನ, ಪರಿವರ್ತನೆಗೆ, ಸುಧಾರಣೆಗೆ ಮತ್ತು ಆತ್ಮೋದ್ಧಾರಕ್ಕೆ ನೆರವಾಗಬೇಕು. ಮಾನವ ವಿಜ್ಞಾನ ನೈಸರ್ಗಿಕ ಕಟ್ಟಳೆಗಳ ಉಲ್ಲಂಘನೆಗಳನ್ನು ಉಡುಗಿಸಿ ನಮ್ಮ ಶರೀರದ ಸಹಜ ಸಾಮರ್ಥ್ಯಗಳನ್ನು ಕ್ರಿಯಾಶಕ್ತಿಗೊಳಿಸಬೇಕು. ವಿಜ್ಞಾನಿ ಆತ್ಮಜ್ಞಾನ ಪಡೆದು ತನ್ನ ಕುಲದ ಅದೃಷ್ಟವನ್ನು ರೂಪಿಸಿ, ಅದರ ಕ್ಷಯವನ್ನು ತಪ್ಪಿಸಬೇಕು.

ವಿವೇಕಾನಂದರು, ವಿಜ್ಞಾನ ಮತ್ತು ಧಾರ್ಮಿಕ ಸಂಯೋಗದ ಮಾನವ ಸೃಷ್ಟಿಗಾಗಿ ಶ್ರಮಿಸಿದರು. ಸ್ವತಂತ್ರವರ್ತಿ ಪರರನ್ನು ಸ್ವತಂತ್ರರನ್ನಾಗಿ ಮಾಡಿ, ಸುಗಮದಾರಿ ತೋರಲು ಅರ್ಹ. ಪೂರ್ಣತೆಯು, ಪ್ರಾಮಾಣಿಕತೆಯು ಮಹಿಮಾಶಯರು ಮಾತ್ರ ಮಾನವ ಕುಲ ಉದ್ಧಾರಕರಾಗಲು ಸಾಧ್ಯ. ವಿಶ್ವ ಸೋದರತ್ವ ಅಂದರೆ ನಮ್ಮ ನೆರೆಹೊರೆಯವರ, ಕುಲ, ಮತ, ಬಣ್ಣ, ಜಾತಿ, ಅಂತಸ್ತು, ಆಚರಣೆ, ಅಭ್ಯಾಸ, ವರ್ತನೆ ಏನಾಗಿದ್ದರೂ ಮನಃಪೂರ್ವಕವಾಗಿ ಪ್ರೀತಿಸುವ ಮನೋಭಾವವನ್ನು ಅನುಸರಿಸಿ ಬೋಧಿಸುವ ಮಹಾನುಭಾವರ ಅಭಾವ ತೀವ್ರವಾಗಿದೆ. ಇಂಥ ಸುಗುಣರು ದುರ್ಲಭವಾದಾಗಲೇ ನಾಗರೀಕತೆಯು ಅವಸಾನ. "ಎಲ್ಲಾ ಅಭಿವೃದ್ಧಿ ಮತ್ತು ನಾಗರೀಕತೆ, ಪೂಜ್ಯರ ಅಥವ ಸಂತರ ಅವತಾರಕ್ಕೆ ಸಮೀಕರಿಸಲ್ಪಟ್ಟಿದೆ." (ಆರ್‌ನಾಲ್ಡ್ ಟಯನಬಿ)

# ಮತ

## ಮಾನವನೆಂಬ ಬಿರುದು

ಪ್ರಕೃತಿ ಮತ್ತು ಮಾನವನ ಇಹಪರದಲ್ಲಿ ಒಂದು ಉತ್ಕೃಷ್ಟ ನಿಯಾಮಕ ಶಕ್ತಿ ಅಥವಾ ದೇವರಿದ್ದಾನೆ, ಎಂಬ ಗಾಢನಂಬಿಕೆ, ವಿಶ್ವಾಸ, ಶ್ರದ್ಧೆ, ಭಕ್ತಿ ಇವುಗಳನ್ನೆಲ್ಲಾ ಒಳಗೊಂಡ ಒಂದು ಕಟ್ಟುಪಾಡೇ ಮತ. ಜೀವನದ ಒಂದು ಶಿಸ್ತು, ನಿಯಮ, ಋಜತೇ, ನೀತಿ ಮತ್ತು ಕರ್ತವ್ಯ ಗಳಿಂದ ಕೂಡಿದ ಜವಾಬ್ದಾರಿ. ತನ್ನ ಹೊಣೆಗಾರಿಕೆಯನ್ನು ಅರಿತು ಬಾಳಿದರೆ ಮಾತ್ರ ಮಾನವನೆಂಬ ಬಿರುದು ಸಲ್ಲುತ್ತದೆ.

ವಿಶ್ವದ ಸಮಗ್ರ ಮಾನವನ ಸಮೀಕ್ಷೆ ಮತ್ತು ಅನುಭವಗಳ ತಿರುಳೇ ಮತ. ವಿವೇಕಾನಂದರು ಹೇಳಿದಂತೆ, ಮತ ಒಂದೇ ಒಂದು, ಸಿದ್ಧಾಂತದಲ್ಲಿ ಅಥವ ಶಾಸ್ತ್ರದಲ್ಲಿ ಅಥವ ಬರೀ ಬೌದ್ಧಿಕ ವಾದಾನು-ವಾದಗಳಲ್ಲಿ ಇಲ್ಲ. ಅದು ಅನುಭವಾತ್ಮಕವಾದುದು. ಅದು ವ್ಯವಹಾರ ಜ್ಞಾನ ಅಲ್ಲದೆ ಜೀವನ ಸಾಗಿಸುವಾಗ ಬರುವ ಆಂತರಿಕ ಅನುಭವ, ಅರಿವಿನ ಸತ್ವ. ಮಾನವ ಮೃಗವನ್ನು ದೇವಮಾನವನನ್ನಾಗಿ ಮಾಡುವ ಶಕ್ತಿ. ಹೀನವಾದ ಸಮಾಜ, ಒಂದನ್ನೊಂದು ಕೊಂದು ತಿನ್ನಲು ಹವಣಿಸುತ್ತಿರುವ ಮೃಗಗಳ ಹಿಂಡಿನ ದಟ್ಟ ಕಾಡಿನ ಸಮಾನ. ಮೃಗದ ಅವತಾರಿಯಾದ ಮಾನವನನ್ನು, ಅನುಭವದ ಎರಕಕ್ಕೆ ಹಾಕಿ, ಹದ ಮಾಡಿ, ಪೂರ್ಣವೂ, ಸ್ವಚ್ಛವೂ ಆದ, ಮಾನವ ಲಲಿತ ಲಕ್ಷಣದ ಅಚ್ಚೊತ್ತುವ ಜಲಪಾತ ಅದು. ವಿಶೇಷ ವಿಶ್ವ ವಿಶ್ವಾಸ, ತುಂಬಿ ಹರಿಯುವ ಹೊಂದಾಣಿಕೆ ಮತ್ತು ಸ್ಥೈರಣೆ, ಅಲ್ಲದೆ ಮಹತ್ತರವಾದ ವಿಚಾರ ಶಕ್ತಿಗಳ ಸಂಯೋಜನೆಯು ಮಥನವೇ ಮತ. ಮಾನವನ ಪರಿ ಪೂರ್ಣತೆಯು ಬದುಕಿಗೆ, ಅನ್ಯೋನ್ಯತೆಯು ವ್ಯಕ್ತಿತ್ವಕ್ಕೆ, ಜೀವನದ ಸಫಲತೆಗೆ ನೈಜಮತ ಅನುಸರಣೆ ಅನಿವಾರ್ಯ. ನೈತಿಕ ಮೌಲ್ಯದ

ಆಧಾರದ ನೀತಿಯು ಶಿಸ್ತುಗಳೇ ಮತದ ಅಸ್ತಿಭಾರ. ಮಾನವ ಸುಖ, ಶಾಂತಿ ಮತ್ತು ಕ್ಷೇಮ ಅನುಭವಿಸಲು ಕೆಲವು ಶಿಸ್ತುಗಳನ್ನು ಪಾಲನೆ ಮಾಡಬೇಕು. ಇವುಗಳನ್ನೇ ಎಲ್ಲಾ ಮತಗಳು ಶಾಸನಗಳಾಗಿ ಅಥವಾ ಕಟ್ಟಳೆಗಳನ್ನಾಗಿ ವಿಧಿಸುತ್ತವೆ. ಮತಧರ್ಮಗಳು ಮಾನವ ಕಲ್ಯಾಣಕ್ಕೆ ಏರ್ಪಟ್ಟ ಕೊಡುಗೆ. ಮಾನವನಲ್ಲಿ ದೈವಪ್ರೇಮ ಪ್ರೇರೇಪಿಸಿ, ದೈವ ಜ್ಞಾನ ವಿಕಾಸಗೊಳಿಸುವುದೇ ಮತಶಿಸ್ತಿನ ಪ್ರಮುಖ ಉದ್ದೇಶ. ಸರ್ವ ಜೀವ ಜಂತುಗಳಿಗೆ ದಯೆ ಮತ್ತು ಕನಿಕರದಿಂದ ವರ್ತಿಸುವ ಮಾನವ ನಿರ್ಮಾಣ ಮತೊಂದು ಗುರಿ. ಒಂದು ಜನಾಂಗದ ನಾಗರೀಕತೆ ಮತ್ತು ಸಂಸ್ಕೃತಿ ಅವರು ಅನುಸರಿಸುವ ಮತ ಕಟ್ಟಳೆಯ ಪ್ರತಿಬಿಂಬ.

## ನಾಸ್ತಿಕತೆ

ಪ್ರಾಚೀನ ಕಾಲದಿಂದ ಅನೇಕ ತತ್ವಜ್ಞಾನಿಗಳು ತಮಗೆ ಸೂಕ್ತವಾದ ತತ್ವಗಳನ್ನು ಪ್ರತಿಪಾದಿಸಿದ್ದಾರೆ. ವೇದಕ್ಕೆ ವಿರುದ್ಧವಾದ ಮತಗಳು ಆದಿಯಿಂದ ವಿಪುಲವಾಗಿ ಇರುವುದಕ್ಕೆ ಆಧಾರಗಳಿವೆ. ಶೈವ ಮತ್ತು ವಿಷ್ಣುಧರ್ಮಗಳು, ಶಿವ ಮತ್ತು ವಿಷ್ಣು ದೇವರ ಪ್ರಾಧಾನ್ಯತೆಯ ಪಟ್ಟು ಹಿಡಿದಿರುವುದನ್ನು ಕಾಣುತ್ತೇವೆ. ಅವು ಕಾಲಾಂತರದಲ್ಲಿ ವೇದದ ತತ್ವ ಗಳೊಡನೆ ಸಮನ್ವಯಗೊಂಡಿರುವ ಅಂಶ ವೇದ್ಯವಾಗಿದೆ. ವೇದವನ್ನು ಸಂಪೂರ್ಣವಾಗಿ ಬಹಿಷ್ಕರಿಸಿದ ಸಾಂಖ್ಯ, ಜೈನ, ಬೌದ್ಧ ಧರ್ಮಗಳು ನಾಸ್ತಿಕ ಮತಗಳಾಗಿದ್ದರೂ, ಅತೀತವಾದ ಧರ್ಮ, ಪುನರ್ಜನ್ಮ, ಪಾಪ-ಪುಣ್ಯ ಕರ್ಮತತ್ವಗಳ ಅಗತ್ಯತೆಯನ್ನು ಒಪ್ಪಿಕೊಂಡಿವೆ.

ಆದರೆ ಲೋಕಾತೀತವಾದ, ಸಾಕ್ಷಿರಹಿತವಾದ, ಪ್ರತ್ಯಕ್ಷ ಪ್ರಮಾಣವಿಲ್ಲದ ಯಾವ ಅಂಶವನ್ನೂ ಒಪ್ಪದ, ಸ್ವಭಾವವಾದದ ಗುಂಪು, ಪುರಾಣಕಾಲ ದಿಂದಲೂ ಎಲ್ಲಾ ಮತಗಳಿಗೂ ಪ್ರತಿಪಕ್ಷವಾದ ನಾಸ್ತಿಕರು ಅಥವಾ ಛಾರ್ವಾಕರನ್ನು ಕಾಣುತ್ತೇವೆ. ಮಣ್ಣು, ಗಾಳಿ, ನೀರು, ಬೆಂಕಿ ಈ ಭೌತ ಪದಾರ್ಥಗಳೇ ದೇಹ ಮತ್ತು ಚೇತನ ಉತ್ಪತ್ತಿಗಳಿಗೆ ಕಾರಣ.

ಈ ಭೂತಗಳ ಸೇರಿಕೆ ನಷ್ಟವಾದಾಗ ಚೇತನ ನಾಶವಾಗಿ ಸಾವು ಸಂಭವಿಸುತ್ತದೆ. ಪ್ರತ್ಯೇಕವಾದ ಆತ್ಮ, ಚೈತನ್ಯ, ಪರಲೋಕ, ಸ್ವರ್ಗ, ನರಕ ಮತ್ತು ದೇವರೆಂಬ ಕಲ್ಪನೆಗಳಿಗೆ ಪ್ರತ್ಯಕ್ಷ ಪ್ರಮಾಣಗಳಿಲ್ಲ. ಸಮಾಜ ಹಿತಕ್ಕೆ ಅವಶ್ಯಕವಾದ ಶಿಸ್ತು, ನೀತಿ, ಧರ್ಮಗಳು ಮಾನವ ನಿರ್ಮಾಣವೇ ಹೊರತು, ದೈವನಿರ್ಮಾಣವಲ್ಲ ಎಂಬುವುವೇ ಅವರ ವಾದ.

ಅನುಮಾನ ಪ್ರಮಾಣ ಅಂದರೆ ದೂರದ ಬೆಟ್ಟದಲ್ಲಿ ಹೊಗೆ ಕಂಡಾಗ ಬೆಂಕಿ ಇರುವಿಕೆಯನ್ನೂ, ಕಾಳಿನಲ್ಲಿ ಎಣ್ಣೆ, ಹಾಲಿನಲ್ಲಿ ಬೆಣ್ಣೆ ಇರುವ ವೇದದ, ದೇವರಸ್ತಿತ್ವದ ಉಪಮಾನವನ್ನು ನಾಸ್ತಿಕರು ಒಪ್ಪರು.

ಈಗ ವಿಜ್ಞಾನ, ಜೀವ ಚೇತನಗಳೆಂಬ ಹೊಸ ರೂಪಗಳಿಗೆ ಭೌತವಸ್ತುಗಳೇ ಕಾರಣ ಎಂದು ಹೊಸ ತತ್ವವನ್ನು ರೂಪಿಸಿರುವುದನ್ನು ಕೇಳುತ್ತಿದ್ದೇವೆ. ಆತ್ಮಜ್ಞಾನದ ವಿಜ್ಞಾನಿಗಳು ತಮ್ಮ ಸಂಶೋಧನೆಗಳಿಂದ, ವಿಶ್ವ ಮತ ಸ್ಥಾಪನೆಗೆ ನಾಂದಿಯಾಗಲಿ ಎಂದು ಹಾರೈಸೋಣ.

## ವೇದಾನುಸರಣೆ

ವೇದಗಳನ್ನು ಅನುಸರಿಸುವ ಮತಗಳನ್ನೆಲ್ಲಾ ದ್ವೈತ, ವಿಶಿಷ್ಟಾದ್ವೈತ ಮತ್ತು ಅದ್ವೈತಗಳೆಂದು ವರ್ಗೀಕರಿಸಬಹುದು ಮಾಧವರು, ರಾಮಾನುಜರು ಮತ್ತು ಶಂಕರರು ಕ್ರಮವಾಗಿ ಆ ಮೂರು ಪಥಗಳ ವೀರ ನಾಯಕರು. ಭಗವದ್ಗೀತೆಯು ಈ ಮೂರು ಭಿನ್ನ ತತ್ವಗಳನ್ನು ಹೊಂದಾಣಿಕೆ ಮಾಡಿದೆ. ಶಂಕರರ ಅದ್ವೈತ, ಸರ್ವಮತಗಳನ್ನು ಹೊಂದಾಣಿಕೆ ಮಾಡಬಲ್ಲ ವಿಶ್ವವ್ಯಾಪ್ತಿಯ ತತ್ವಶಾಸ್ತ್ರ. ಅದ್ವೈತತೆಯೇ ಭವಿಷ್ಯ ಪ್ರಬುದ್ಧ ಮಾನವತೆಯ ಧರ್ಮ.

## ನಿಸ್ವಾರ್ಥ ಸೇವೆಯ ವ್ಯವಸ್ಥೆ

ವೈರತ್ವ, ಹೊಟ್ಟೆ ಉರಿ, ದುರಾಸೆ, ಅಹಂಕಾರ ಮತ್ತು ಸ್ವಾರ್ಥಗಳನ್ನು

ಸಂಪೂರ್ಣವಾಗಿ ತೊರೆದಿರುವುದೇ ನಿಜಮತದ ಲಕ್ಷಣ. ಪ್ರತಿ ಜೀವಿ-ಯನ್ನು ಮನಃಪೂರ್ವಕವಾಗಿ ಪ್ರೀತಿಸುವಂತೆ ಮಾಡಿ ಮಾನವ ಸೇವೆ-ಯನ್ನು ಕೈಗೊಳ್ಳುವಂತೆ ಪ್ರೇರೇಪಿಸುವ ವ್ಯವಸ್ಥೆಯೇ ಶ್ರೇಷ್ಠ ಮತ.

ನಿಜವಾದ ಮತಾವಲಂಬಿಯು ಇತರ ಮತ ಬೆಂಬಲಿಗರನ್ನು, ತನ್ನ ಸ್ವ-ಶ್ರೇಯಸ್ಸಿಗಾಗಿ ನಡೆಸುವ, ನೀತಿ ಸಮರದ ಸಹಪಾಠಿಗಳೆಂದು ಆದರಿಸಿ ಗೌರವಿಸುತ್ತಾನೆ. ಮಾನವ ಕುಲ, ವೈಚಿತ್ರ್ಯತೆಯ ಸಂಸ್ಕೃತಿ, ವೈವಿಧ್ಯತೆಯ ಆಲೋಚನೆಗಳಿಂದ ಆವರಿಸಿದೆ. ಒಂದೇ ಒಂದು ಮತ ಎಷ್ಟೇ ಶ್ರೇಷ್ಠವಾಗಿರಲಿ, ಪ್ರಪಂಚದ ಎಲ್ಲಾ ಜನರಿಗೂ ಶಾಂತಿ, ಸಮಾಧಾನಗಳನ್ನು ಒದಗಿಸಲು ಅಸಾಧ್ಯ. ವಿಶಿಷ್ಟ ಮಾನವ ಕುಲ ವನ್ನು ಒಂದೇ ಬಗೆಯ ಸಂಪ್ರದಾಯ, ಸಂಸ್ಕಾರ, ನಂಬಿಕೆ, ತತ್ವ ಮತ್ತು ದೇವತಾ ಶಾಸ್ತ್ರಗಳಿಂದ ಬಂಧಿಸುವ ಬಯಕೆ, ಅಪ್ರಯೋಜಕ. ಹದಿನೆಂಟನೇ ಶತಮಾನದ ಅವತಾರ ಪುರುಷ ರಾಮ ಕೃಷ್ಣ ಪರಮ ಹಂಸರು ಸತತ ಸಾಧನೆಯಿಂದ, ಸರ್ವಮತಗಳ ಧ್ಯೇಯ ಒಂದೇ ಎಂದು ನಿರ್ದಿಷ್ಟಪಡಿಸಿದ್ದಾರೆ. ಪ್ರಪಂಚದ ಎಲ್ಲಾ ಮತಗಳಿಗೂ ಸ್ಥಾನವಿದೆ. ಅವು ಅನಪೂರಕವೂ ಮತ್ತು ಸಹಭಾವಿಯುತವಾದುವು. ವಿರೋಧಾ-ತ್ಮಕವಾಗಿ ಸಣೆದಾಡುವ ಅವಶ್ಯಕತೆ ಇಲ್ಲವೇ ಇಲ್ಲ ಎಂದು ಒತ್ತಿ ಹೇಳಿ-ದ್ದಾರೆ. ತನ್ನ ಮತದ ಮೇಲಿನ ವಿಪರೀತ ವಿಶ್ವಾಸ ಮತ್ತು ಅಂಧ ಪ್ರೇಮ ಆಘಾತಕ್ಕೆಡೆ ಕೊಡುತ್ತದೆ. ಹಠದಿಂದ ಕೂಡಿದ ಮತ ಪದ್ಧತಿ ಅಪ್ರಯೋಜಕ. ಅಂಧ ಧರ್ಮಾಂಧತೆ, ಐಕ್ಯತೆ ಮತ್ತು ಮಧುರ ಬಾಂಧವ್ಯವನ್ನು ಕಡಿಲಿಸಿ ಮತ ಮತ್ಸರದ ವಿಷವನ್ನು ಕಾರುತ್ತದೆ. ಅಜ್ಞಾನ ಜನ್ಮವಾದ ಮತ ಕಲ್ಪನೆ-ಜಾತಿ, ಪಂಥ, ಕೋಮು, ಪಂಗಡ ಗಳೆಂಬ ನೂರಾರು ಬೇಧ ಭಾವನೆಗಳಿಗೆ ಮೂಲವಾಗಿ ಸಮಾಜವನ್ನು ಛಿದ್ರತೆಗೊಳಿಸುತ್ತದೆ

## ವೈಚಾರಿಕತೆ

ಸ್ವಾರ್ಥಿಗಳು ಧರ್ಮಗ್ರಂಥಗಳನ್ನು ಉದಾಹರಿಸಿ, ಸತಿ, ಗುಲಾಮತ್ವ,

ದೇವದಾಸಿ, ಅಸ್ಪೃಶ್ಯತೆ, ವೈಧವ್ಯಕ್ಕೆ ನಿರ್ಬಂಧದ ವಿರೂಪತೆ, ಕೇಶ ಮುಂಡನೆ, ವಿಕಾರತೆ, ಚಿತ್ರಹಿಂಸೆ, ಸುರೂಪತೆಗೆ, ವಿರೂಪತೆ, ಗಂಡಸಿನ ಪ್ರಾಧಾನ್ಯತೆ, ಪ್ರಾಣಿಬಲಿ, ನರಬಲಿ, ನಿರ್ಬಂಧದ ಮತ ಪರಿವರ್ತನೆ ಮತದ್ವೇಷದ ಕಿರುಕುಳದ ಮತೀಯ ನ್ಯಾಯ ಸ್ಥಾನ. ಕಗ್ಗೊಲೆ, ಮುಂತಾದ ಅನೇಕ ಅಮಾನುಷ ಮತ್ತು ಅನೀತಿ ಪದ್ಧತಿಗಳನ್ನು ನಿರ್ಭಯವಾಗಿ ಮುಂದುವರಿಸಿಕೊಂಡು ಬಂದು ರಾಷ್ಟ್ರಗಳ ಶಾಂತಿಯನ್ನು ಕಲಕುತ್ತಾ ಬರುತ್ತಿದ್ದಾರೆ. ಇತಿಹಾಸದಲ್ಲಿ ಮತದ ವಿಚಾರದಲ್ಲಿ ತಪ್ಪು ನೆಪ್ಪು ನಡೆದಿದೆಯೆಂದು ಬರೆಯುವುದು ಸಾಮಾನ್ಯ ಅಂದಿನ ಸಂಸ್ಕೃತಿಗೆ ತಕ್ಕಂತೆ ಆಗು-ಹೋಗುಗಳು ಸಹಜ. ಇತಿಹಾಸಕಾರರೆಲ್ಲ ಪ್ರಾಮಾಣಿಕರು ಮತ್ತು ಸಮದರ್ಶಿಗಳು ಅಲ್ಲ.

ವಿಕಾಸನ ವಿಸ್ತಾರವಾದಂತೆ, ಮಾನವ ಸ್ಥಿಮಿತನು ಮತ್ತು ಸಂಯಮದಿಂದ ಗಂಭೀರನು ಆಗಬೇಕು. ಅವನ ದೃಷ್ಟಿ. ಚೈತನ್ಯ. ಶ್ರೀರಾಮನ ಶ್ರೀಕೃಷ್ಣನ, ಬುದ್ಧನ, ಏಸುವಿನ ಅಲ್ಲದೇ ಮಹಮದನ ಆದರ್ಶಪಾಲನೆಗೆ ಮುಡಿಪಾಗಿರಬೇಕು.

## ಸಂಸ್ಕೃತಿಯ ಪ್ರತಿಬಿಂಬ

ವೈಯಕ್ತಿಕ ಭಾವನೆಯ ಸೋಂಕಿಲ್ಲದೇ, ವಿಷಯಗಳ ಆಧಾರದ ಮೇಲೆ, ನಿಷ್ಪಕ್ಷಪಾತದ ತೀರ್ಮಾನಕ್ಕೆ ಬರುವ ಸುಸಂಸ್ಕೃತಿಯ ಅಭ್ಯಾಸವೇ ವೈಜ್ಞಾನಿಕ ಮನೋವೃತ್ತಿ. ಮತ ಅನೇಕ ಅದ್ಭುತ ಆನಂದಗಳನ್ನು ಅನುಗ್ರಹಿಸಿದರೂ, ವಿಚಾರಶೀಲತೆಯ ಅಭಾವದಿಂದ ಅಸಂಖ್ಯ ಅನರ್ಥಗಳಿಂದ ಅಧಃಪತನಕ್ಕೊಳಪಡಿಸುತ್ತಿದೆ. ಪ್ರಪಂಚದ ಒಂದಲ್ಲ ಒಂದು ಮೂಲೆಯಲ್ಲಿ ಅಂಧ ಶ್ರದ್ಧೆಗೆ ಆಹುತಿಯಾತಿ ಸ್ಫೋಟಗೊಂಡು ಅಶಾಂತಿಯಿಂದ ಸಮಗ್ರ ರಾಷ್ಟ್ರವೇ ತಲ್ಲಣಿಸುತ್ತಿರುವುದು ಪ್ರತಿನಿತ್ಯದ ಅನುಭವ. ಮತ ಮೌಢ್ಯದ ಮರಣ-ಘಂಟೆ, ದುಃಸಹ ಭೀಕರಗಳನ್ನು ಕ್ಷಣ ಮಾತ್ರದಲ್ಲಿ ಪೂರೈಸಿಬಿಡುತ್ತದೆ. ಅವುಗಳ ಸೂತ್ರಧಾರರು ಅಜ್ಞಾನದ ಅವತಾರಿಗಳು.

ರಾಷ್ಟ್ರದ ಐಕ್ಯತೆ, ಸಮಗ್ರತೆ, ಪುರೋಭಿವೃದ್ಧಿ ಮತ್ತು ಅಂತರಾಷ್ಟ್ರಗಳ, ಪ್ರತಿಕ್ರಿಯೆಗಳನ್ನು ತಮ್ಮ ಸ್ವಾರ್ಥ ಸಾಧನೆಗೆ ಅಧೀನ ಪಡಿಸುತ್ತಾರೆ.

ಆ ಸ್ವಪ್ರಯೋಜನಾಸಕ್ತರು ಕೇಡಿನ ಕ್ಷಣದವರೆಗೂ ಸಾಮಾನ್ಯರಲ್ಲಿ ತಾವು ಕರುಣಾವತಾರಿ, ಸಮಾಜಸೇವಕ, ಬಡವ ಬಂಧು, ದೇಶಭಕ್ತ, ಸುಗುಣ, ವಿಶ್ವಸೋದರ ಸಂಪನ್ನ, ಧರ್ಮಾತ್ಮ, ಮುಂತಾದ ಉದಾತ್ತ ಭಾವೈಕ ಆದರ್ಶಪಾಲಕ ಎಂಬ ಅಭಿಪ್ರಾಯಗಳನ್ನು ಮೂಡಿಸಿರುತ್ತಾರೆ. ಸರ್ವ ನಾಶವಾದ ಮೇಲೆ ವಿಧ್ಯತೆ ಬಯಲಾಗುತ್ತದೆ. ಜನರ ಜ್ಞಾಪಕಶಕ್ತಿಯು ನಿಸ್ಸತ್ವವನ್ನು ಅರಿತಿರುವ ಅಬದ್ಧ ನಾಯಕರು ಮತ್ತೊಂದು ರೂಪದಲ್ಲಿ ಪ್ರತ್ಯಕ್ಷರಾಗಿ ತಮ್ಮ ಅಧಿಕಾರ ಮತ್ತು ಅಂತಸ್ತಿನ ಬೇಟೆಯನ್ನು ಮುಂದುವರಿಸುತ್ತಾರೆ. ಈ ವಿಷಮ ಚಕ್ರಕ್ಕೆ ವೈಚಾರಿಕತೆ ಒಂದೇ ಪರಿಹಾರ ಮಾರ್ಗ. ವಿಚಾರಶೀಲತೆಯೇ ಪರಿಣಾಮಕಾರಿಯಾದ ಮದ್ದು.

ಪ್ರಾಮಾಣಿಕ ಮತಾವಲಂಬಿಯು ಪ್ರಾಂತೀಯ ಮತ್ತು ಎಲ್ಲಾ ಪ್ರತ್ಯೇಕ ಒಲವುಗಳನ್ನು ಬಹಿಷ್ಕರಿಸಿ ವಿಶ್ವಪ್ರೇಮಿಯಾಗಲು ಸತತ ಪ್ರಯತ್ನ ನಡೆಸುತ್ತಾನೆ. ವೈಜ್ಞಾನದ ಮೂಲವಾದ ವೈಚಾರಿಕತೆಯನ್ನು ಮೈಗೂಡಿಸಿಕೊಂಡರೆ ಮಾತ್ರ ಸರ್ವರ ಶ್ರೇಯಸ್ಸು,

## ಮನುಜ ಮತ – ವಿಶ್ವ ಪಥ

ಗುಡಿ, ಚರ್ಚ್, ಮಸೀದಿಗಳ ಬಿಟ್ಟು ಹೊರಬನ್ನಿ. ಬಡತನದ ಬುಡ ಮುಟ್ಟಿ ಕೀಳಬನ್ನಿ, ಮೌಢ್ಯತೆಯ ಮಾರಿಯನ್ನು ಹೊರದೂಡಲೈ ತನ್ನಿ ವಿಜ್ಞಾನ ದೀವಿಗೆಯು ಹಿಡಿಯಬನ್ನಿ, ಓ ಬನ್ನಿ ಸೋದರರೇ, ಬೇಗಬನ್ನಿ ಕಿಲುಕದಿರಿ ಮತವೆಂಬ ಮೋಹದಾ ಜ್ಞಾನಕ್ಕೆ, ಮತಿಯಿಂದ ದುಡಿಯಿರೈ ಲೋಕಹಿತಕ್ಕೆ, ಆ ಮತದ, ಈ ಮತದ, ಹಳೇ ಮತದ ಸಹವಾಸ ಸಾಕಿನ್ನು, ಸೇರಿರೈ ಮನುಜ ಮತಕ್ಕೆ, ಓ ಬನ್ನಿ ಸೋದರರೇ, ವಿಶ್ವಪಥಕ್ಕೆ.

"ಮನುಜ ಮತ, ವಿಶ್ವ ಪಥ, ಸರ್ವೋದಯ, ಪೂರ್ಣದೃಷ್ಟಿ" ಎಂಬ ಕುವೆಂಪು ಅವರ ಮಂತ್ರಗಳೇ ಮಾನವ ಕುಲದ ಉದ್ಧಾರದ ಮಾರ್ಗ. ಈ ಹೆಗ್ಗಳದ ಮಾರ್ಗಗಳನ್ನು ಅನುಸರಿಸಿದ ಮಹಾನುಭಾವರಿಂದಲೇ ಲೋಕ ಕಲ್ಯಾಣ ನಡೆದಿರುವುದು. ಈ ಧ್ಯೇಯಕ್ಕಾಗಿ ಅನೇಕರು ಆತ್ಮ ಸಮರ್ಪಣೆ ಮಾಡಿಕೊಂಡಿದ್ದಾರೆ. ಇಂಥ ದಿವ್ಯ ತ್ಯಾಗವೇ ನಿಜ ನಾಗರೀಕತೆ ಮತ್ತು ಶ್ರೇಷ್ಠ ಸಂಸ್ಕೃತಿ. ಜೀವನಕ್ಕೆ ಅಳವಡಿಸದ ಧರ್ಮ ಗ್ರಂಥಗಳ ಅಭಿಪ್ರಾಯಗಳು ಸಂಸ್ಕೃತಿಯಾಗಲಾರದು. ಮಹಾತ್ಮ ಗಾಂಧಿಯವರು ಧರ್ಮಗ್ರಂಥಗಳ ಆಜ್ಞೆಗಳನ್ನು ಕೂಲಂಕುಶವಾಗಿ ವಿಚಾರಿಸಿ, ಅವುಗಳ ಅನುಸರಣೆಯಿಂದ ಹಿತವಾದ ಫಲ ಕೈಗೂಡಿದ ಮೇಲೇ ಅದನ್ನು ಇತರರಿಗೆ ಹೇಳುತ್ತಿದ್ದರು ಮತ್ತು ಬರೆಯುತ್ತಿದ್ದರು. ಅವರ ತತ್ವಗಳು ಪ್ರಪಂಚದ ಎಲ್ಲಾ ಭಾಷೆಗಳಲ್ಲೂ ಮುದ್ರಿತವಾಗಿವೆ. ಭಾರತೀಯರು ಗಾಂಧೀಜಿಯವರ ತತ್ವಗಳನ್ನು ಕಾಯಾ, ವಾಚಾ, ಮನಸಾ ಅನುಸರಿಸಿದಾಗ ಮಾತ್ರ ಗಾಂಧಿ ಸಂಸ್ಕೃತಿಯ ಸುಗುಣರು ಎಂಬ ಗೌರವ, ಮನ್ನಣೆ ಲಭಿಸುತ್ತದೆ. ಪ್ರಪಂಚದಲ್ಲಿ ಪ್ರತಿ ಘಳಿಗೆಯಲ್ಲೂ ನಾಚಿಕೆ ಇಲ್ಲದೆ ನಡೆಯುತ್ತಿರುವ ಕೋಟಿ ತರಹದ ಶೋಷಣೆಗಳು ಕೊನೆಯಾಗಿ, ಮಾನವ ಕೋಟಿಗೆ ಸುಖ, ಶಾಂತಿ ಮತ್ತು ಸಂತೋಷ ಸಿಕ್ಕಬೇಕಾದರೆ ಗಾಂಧಿ ತತ್ವಗಳ ಅನುಸರಣೆಯಿಂದಲೇ ಮಾತ್ರ ಸಾಧ್ಯ.

## ಸನಾತನ ಧರ್ಮ

## ವಿಶ್ವ ಧರ್ಮ – ಮಾನವ ಸೋದರತ್ವ

ಭಾರತ ದೇಶದ ತತ್ವಜ್ಞಾನವನ್ನು ಸನಾತನ ಧರ್ಮ ಎಂದು ಕರೆಯಲ್ಪಟ್ಟಿದೆ. ಇದೇ ಮಾನವ ಧರ್ಮ, ವಿಶ್ವ ಧರ್ಮ. ಹಿಂದುತ್ವ ಎಂಬ ನಾಮಾಂಕಿತ ಪರಕೀಯರು ಕೊಟ್ಟಿದ್ದು. ವಿಶ್ವವೆಲ್ಲಾ ಒಂದೇ ಕುಟುಂಬ ಎಂದು ವೇದ ಸಾರಿದೆ. ಸನಾತನ ಧರ್ಮದ ಅಡಿಯಲ್ಲಿ ಪ್ರತ್ಯೇಕತೆ ಮತ್ತು ವಿರೋಧ ಭಾವಗಳಿಗೆ ಎಡೆ ಇಲ್ಲ. ಅವು ವಿಶ್ವವ್ಯಾಪ್ತಿಯ ಕೆಲವು

ಮೂಲ ತತ್ವಗಳ ಅಸ್ತಿಭಾರದ ಮೇಲೆ ನೆಲಸಿವೆ. ಅವುಗಳಲ್ಲಿ, ಸರ್ವ ಜೀವಿಗಳಲ್ಲಿ ನೆಲಸಿರುವ ವಿಶಿಷ್ಟ ಲಕ್ಷಣದ ಮತ್ತು ಚೈತನ್ಯ ಸ್ವರೂಪದ ಆತ್ಮ ಒಂದೇ ಎಂಬುದು ಬಹು ಪ್ರಮುಖವಾದುದು. ಪ್ರಾಚೀನ ಋಷಿಗಳು ಎಲ್ಲಾ ಮತಗಳ ಏಕತ್ವವನ್ನೂ ಎತ್ತಿ ಹಿಡಿದಿದ್ದಾರೆ. ಸಮುದ್ರ ಸೇರುವುದೇ ಎಲ್ಲಾ ನದಿಗಳ ಗುರಿ ಈಶ್ವರ ಅಥವ ಸತ್ಯ-ಸಾಕ್ಷಾತ್ಕಾರದಿಂದ ಸರ್ವರ ಸುಖ ಸಂತೋಷಗಳೇ ಎಲ್ಲಾ ತತ್ವಗಳ ತಾತ್ಪರ್ಯ ಈ ಆತ್ಮದ ಅಖಂಡತೆಯನ್ನು, ಮತ ಮೈತ್ರಿಯನ್ನು ಮತ್ತು ಮಾನವ ಸಹೋದರತ್ವವನ್ನು ಒಂದು ಶತಮಾನದ ಹಿಂದೆ ಸ್ವಾಮಿ ವಿವೇಕಾನಂದರವರು, ತಮ್ಮ ಸಿಂಹವಾಣಿಯಿಂದ ಚಿಕಾಗೊ (ಅಮೇರಿಕಾ)ದಲ್ಲಿ ಘೋಷಿಸಿ, ಸರ್ವರನ್ನೂ ಚಕಿತಗೊಳಿಸಿದರು. ಈ ಯುಗದ ಋಷಿಗಳಾದ ಮಹಾತ್ಮ ಗಾಂಧಿಯವರು ತಮ್ಮ ಪ್ರತಿನಿತ್ಯದ ಪ್ರಾರ್ಥನಾ ಸಭೆಗಳಲ್ಲಿ ಸರ್ವಮತದ ಗ್ರಂಥಗಳನ್ನು ಪಠಿಸುತ್ತಿದ್ದರು. "ಈಶ್ವರ ಅಲ್ಲಾ ತೇರಾನಾಮ್, ಸಬುಕು ಸನ್ಮತಿ ದೇವ್ ಭಗವಾನ್" ಎಂಬ ವಿಶ್ವವ್ಯಾಪ್ತಿಯ ಪ್ರಾರ್ಥನೆ ಲೋಕ ಪ್ರಸಿದ್ಧವಾಗಿದೆ.

## ಪುನರುಜ್ಜೀವನ

ಪರಕೀಯರ ಧಾಳಿ ಮತ್ತು ಆಕ್ರಮಣಗಳಿಂದ ಸನಾತನ ಧರ್ಮ, ಅಂಧ ಕಾರದ ಅವಧಿಗಳನ್ನು ಕಳೆದು ಚೇತರಿಸಿಕೊಳ್ಳುತ್ತಿದೆ. ಪ್ರಾಚೀನ ಋಷಿಗಳ ಆಶೀರ್ವಾದದಿಂದ ಉದ್ಭವಿಸಿದ ಅವತಾರ ಪುರುಷರ ಚಿಂತನೆ, ಪ್ರತಿಭಟನೆಗಳ ಮೂಲಕ ಪುನರುಜ್ಜೀವ ಹೊಂದಿದೆ. ರಾಜಾರಾಂ ಮೋಹನರಾಯ್, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಬಸವಣ್ಣ, ಗೋಖಲೆ, ಅನಿಬೆಸೆಂಟರು, ಅರಬಿಂದರು, ರವೀಂದ್ರನಾಥ ಠಾಕೂರ್, ಮಹಾತ್ಮ ಗಾಂಧಿ, ವಿನೋಬಾಭಾವೆ ಮುಂತಾದ ಮಹಾ ಪುರುಷರು ಸಮಾಜ ಶ್ರೇಯಸ್ಸಿನ ಸಮರ ನಡೆಸುತ್ತಲೇ ಬಂದಿದ್ದಾರೆ. ಬ್ರಹ್ಮ ಸಮಾಜ, ಆರ್ಯ ಸಮಾಜ, ಥಿಯಾಸಾಫಿಕಲ್ ಸೊಸೈಟಿ, ರಾಮಕೃಷ್ಣ ಮಿಷನ್ ಇವುಗಳು ಅಗ್ರಪಾತ್ರ ವಹಿಸಿ, ಸನಾತನ

ಧರ್ಮದ ನಿಜಸ್ವರೂಪಣೆಯನ್ನು ಎತ್ತಿ ಹಿಡಿದಿದ್ದಾರೆ. ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಮಹಾತ್ಮ ಗಾಂಧಿಯವರ ನೇತೃತ್ವದಲ್ಲಿ ರಾಷ್ಟ್ರ ರಾಜಕೀಯ ಸ್ವಾತಂತ್ರ್ಯ ಗಳಿಸಿಕೊಳ್ಳುವುದಕ್ಕೆ ಧವಲ ಧರ್ಮವಾದ ಅಹಿಂಸೆಯೇ ವಿಶಿಷ್ಟ ಮತ್ತು ಅದ್ಭುತವಾದ ಅಸ್ತ್ರವಾಯಿತು. ರಾಷ್ಟ್ರೀಯ ಪುನರುತ್ಥಾನಕ್ಕೆ ಶ್ರಮಿಸಿದ ಅಗ್ರಗಣ್ಯರೆಲ್ಲಾ ಅಧ್ಯಾತ್ಮಿಕ ಸಂಪತ್ತನ್ನು ಊರ್ಜಿತಗೊಳಿಸಿಕೊಂಡು ಸಾಮಾನ್ಯರನ್ನು ತಿದ್ದಲು ಸರ್ವಪ್ರಯತ್ನಗಳನ್ನು ನಡೆಸಿದ್ದಾರೆ. ಸನಾತನ ಧರ್ಮದ ವರ್ಚಸ್ಸು ಪುನರ್ರಚಿತವಾಯಿತು.

ಕ್ರೈಸ್ತ, ಇಸ್ಲಾಂ, ಜುಡಿಸಮ್, ಜೋರಾಷ್ಟ್ರ ಮುಂತಾದ ಮತಗಳಿಗೆ, ಪರಮತ, ಅಸಹಿಷ್ಣುತೆ ಸಾಮಾನ್ಯ. ಭಾರತದಲ್ಲಿ ಹಿಂದು ಮತ್ತು ಬೌದ್ಧ ಮತಗಳಿಗೆ, ರಕ್ತಪಾತರಹಿತ, ಶಾಂತಿ, ಸಹಿಷ್ಣುತೆ ಮತ್ತು ಪ್ರಸನ್ನತೆಗಳೇ ಆಧಾರ ಸ್ಥಂಭ - ಎಂಬ ಅಭಿಪ್ರಾಯವನ್ನು ಪ್ರಪಂಚ ಪ್ರಸಿದ್ಧ, ಇತಿಹಾಸಕಾರ ಆರ್. ನಾಲ್ಡ್, ಜೆ. ಟಾಯ್‌ನಿವಿ ಅವರು 17-9-1992 ಭವಾನ್ ಪತ್ರಿಕೆಯಲ್ಲಿ ವ್ಯಕ್ತಪಡಿಸಿದ್ದಾರೆ. ಭಾರತ ನಮ್ಮ ಕುಲಮಾತೆ ಸಂಸ್ಕೃತ ಯೂರೋಪ್ ಭಾಷೆಗಳ ತಾಯಿ ಎಂದು ಅಮೇರಿಕಾದ ಮತ್ತೊಬ್ಬ ಇತಿಹಾಸಕಾರ ಮಹಿತ್ತು ಜಿಜ್ಞಾಸು ಹೇಳಿ-ದ್ದಾರೆ. ಅಲ್ಲದೇ ನಮ್ಮ ತತ್ವಜ್ಞಾನದ ತಾಯಿ. ಭಾರತ ಮಾನವ ಕೋಟಿಯ ಅಧ್ಯಾತ್ಮಿಕ-ತಾಯಿ ಎಂದು ರೂತ್‌ರೆಯ್ನ ಎಂಬ ಪ್ರಸಿದ್ಧ ಅಮೇರಿಕಾದ ಸೋದರಿ ಪ್ರಶಂಸಿಸಿದ್ದಾಳೆ.

ಸ್ವಾರ್ಥಕ್ಕಾಗಿ ಇಂಥ ಅದ್ಭುತ ಸನಾತನ ಮತ ತತ್ವಗಳಿಗೆ ಅಪಾರ್ಥ ಕಲ್ಪಿಸಿ ಸಾಮಾನ್ಯರನ್ನು ಉದ್ರೇಕಿಸಿ, ಅನಾಹುತಗಳಿಗೆ ಒಳಪಡಿಸು-ತ್ತಿರುವುದು ನಮ್ಮ ದೌರ್ಭಾಗ್ಯ. ಪರಕೀಯರು ತಮ್ಮ ಪ್ರಭುತ್ವವನ್ನು ಮುಂದುವರೆಸಿಕೊಂಡು ಹೋಗಲು ಮತ ಮೌಢ್ಯವನ್ನೇ, ಒಂದು ದೊಡ್ಡ ಆಯುಧವಾಗಿ ಬಳಸಿಕೊಂಡರು. ಮತ ವೈಷಮ್ಯದ ಕಿಚ್ಚು ಸರ್ವದಾ ಉರಿಯುತ್ತಿರಲೆಂಬ ಸೇಡಿನಿಂದ, ರಾಷ್ಟ್ರವನ್ನು ಇಬ್ಭಾಗ ಮಾಡಿದರು. ಅವರ ದುರುದ್ದೇಶವನ್ನು ಅರ್ಧ ಶತಮಾನ ಕಳೆದರೂ, ಭಾರತವಾಗಲೀ, ಪಾಕಿಸ್ತಾನವಾಗಲೀ ಅರ್ಥ ಮಾಡಿಕೊಳ್ಳದಿರುವಷ್ಟು

ಅಜ್ಞಾನ ತುಂಬಿದೆ.

ಕ್ಷುಲ್ಲಕ ರಾಜಕೀಯಕ್ಕಾಗಿ, ದೇವರ ಹೆಸರಿನಲ್ಲಿ ಲಕ್ಷಾಂತರ ನಿರ್ದೋಷಿ-ಗಳನ್ನು ಸಾವು-ನೋವಿಗೆ ಗುರಿಮಾಡಿ ಶಾಂತಿ ಕಲಕುತ್ತಿದ್ದೇವೆ. ಕ್ರೂರ ಬಡತನವನ್ನು ಕಿತ್ತೆಸೆಯುವುದನ್ನು ಬಿಟ್ಟು, ಬಡವರ ಕಣ್ಣೀರ ಕೋಡಿ ಹರಿಸುತ್ತಿದ್ದೇವೆ. ಪುನಃ ನಾವು ಗುಲಾಮರಾಗುತ್ತವೇನೋ ಎಂಬ ಭಯ ಬುದ್ಧಿಜೀವಿಗಳನ್ನು ಕಾಡುತ್ತಿದೆ. ನಮ್ಮ ಅಜ್ಞಾನ ಅಳಿಸಿ, ಜ್ಞಾನ ಜನನಿಸಲಿ ಜಗತ್ತಲೆ ದೂರವಾಗಿ ಹೊಳೆಯುವ ಬೆಳಕು ಬರಲಿ. ವಿಶ್ವವೆಲ್ಲ ಒಂದೇ ಕುಟುಂಬ ಮತ್ತು ವಿಶ್ವ ಸಹೋದರತ್ವದ ತತ್ವವನ್ನು ಮನಃಪೂರಕವಾಗಿ ಆಚರಿಸುತ್ತಿದ್ದ ನಮ್ಮ ಪ್ರಾಚೀನರ, ವ್ಯವಹಾರ ಜ್ಞಾನ ಮತ್ತು ಸಂಸ್ಕೃತಿ ಹಿಮಾಲಯದಷ್ಟು ಹಿರಿದಾಗಿತ್ತು. ಇಂದು ವಿಜ್ಞಾನ ವಿಶ್ವವನ್ನು ಒಂದು ಸತ್ಯ ಸಮಾಜವನ್ನಾಗಿ ರಚಿಸಿ ವೇದದ ವಾಕ್ಯಗಳನ್ನು ಊರ್ಜಿತಗೊಳಿಸಿದೆ ನೋವು ನಲಿವುಗಳು ಆದ ಆ ಕ್ಷಣದಲ್ಲೇ ಪ್ರಪಂಚದ ಪ್ರತಿ ಮೂಲೆಗೂ ಮುಟ್ಟುತ್ತಿದೆ. ಅಲ್ಲೆಲ್ಲಾ ಆತ್ಮೀಯರು, ತಮ್ಮ ತಮ್ಮ ಸಂಸ್ಕೃತಿಗನುಸಾರ ಪ್ರತಿಕ್ರಿಯಿಸುತ್ತಾರೆ. ಭೂಮಿಯ ಪ್ರತಿಯೊಂದು ಭಾಗದಲ್ಲೂ, ಸನಾತನ ಸೋದರರು ಸಹೃದಯರಾಗಿ ಬಾಳುತ್ತಿದ್ದಾರೆ. ಭಾರತ ಭೂಮಿ ನಿವಾಸಿಗಳೇ ಬಂಧಿತರಾಗಿ, ಅಜ್ಞಾನಿಗಳಾಗಿ, ಸನಾತನ ಧರ್ಮದ, ನಿಜರೂಪವಾದ ಸತ್ಯ, ಅಹಿಂಸೆ, ಪರಮತ ಸಹಿಷ್ಣುತೆಗಳನ್ನು ರೂಢಿಸಿಕೊಳ್ಳಲು ಅಶಕ್ತರಾಗಿ ತಮ್ಮ ವ್ಯಾಪಕತೆಯನ್ನು ಪರಿಮಿತಿಗೊಳಿಸಿಕೊಂಡು ಸಂಕಟಕ್ಕೊಳಗಾಗಿದ್ದಾರೆ. ಜನ್ಮ ಭೂಮಿಯನ್ನು ಉಳಿಸಲು, ಭಾರತೀಯರು ಮನಸ್ಸು ತಕ್ಷಣ ಮಾಡಬೇಕಾಗಿದೆ.

ಭಾರತೀಯ ಸೋದರರೇ, ವೀರ ಆರ್ಯರೇ, ಪೂಜ್ಯ ಬ್ರಹ್ಮ ಜ್ಞಾನಿಗಳೇ ಅಹಿಂಸಾ ಸೇವಾ ತ್ಯಾಗ ಮನೋಭಾವದ ಸತ್ಪುರುಷರೇ, ಅರಿವು ಮೂಡಿಸಿ, ಮತ ಮೌಢ್ಯ ತೊಲಗಿಸಿ. ಶ್ರೀರಾಮ ಶ್ರೀಕೃಷ್ಣ ಏಸು, ಮಹಮದ್, ಗುರುನಾನಕ್, ಗಾಂಧೀಜಿ, ಪರಮಹಂಸ, ವಿವೇಕಾನಂದ ಮುಂತಾದ ಜ್ಞಾನಿಗಳ ಗೌರವ ಉತ್ತರಾಧಿಕಾರಿಗಳಾಗಿ ವಿಶ್ವ ನಿಮ್ಮ ಮಾರ್ಗದರ್ಶನಕ್ಕಾಗಿ ಕಾಯುತ್ತಿದೆ. ಮಾನವ ಕುಲದ ಕ್ಷಯವನ್ನು ತಪ್ಪಿಸಿ, ಪಾವನರಾಗಿ, ಪುಣ್ಯಾತ್ಮರಾಗಿ, ನಿಜ ಭಾರತೀಯರಾಗಿ ರಂಜಿಸಿ.

# ಏಕೈಕ ದೇವರು

ಪ್ರಾಚೀನ ಋಷಿಗಳು ಸಾವಿರಾರು ವರ್ಷಗಳ ಸತತ ಸಾಧನೆಯ ಅನು-
ಭವದಿಂದ ಇಡೀ ವಿಶ್ವಕ್ಕೆಲ್ಲಾ ದೇವರು ಒಬ್ಬನೇ ಎಂದು ಧೃಢೀಕರಿಸಿ-
ದ್ದಾರೆ. ಆ ಅವ್ಯಕ್ತ ಶಕ್ತಿಯನ್ನು ಮಾನವನ ಶ್ರೇಯಸ್ಸಿಗಾಗಿ ಭಕ್ತಿ
ಯಿಂದ, ಶ್ರದ್ಧೆಯಿಂದ ಪೂಜಿಸುತ್ತಿರುವುದು ಸಾಂಪ್ರದಾಯಿಕ. ಆರಾ
ಧನೆಗೆ ಪ್ರತಿಫಲವಾಗಿ ಆಸೆ-ಆಕಾಂಕ್ಷೆಗಳನ್ನು ಪೂರೈಸಿ, ಸುಖ, ಸಂತೋಷ
ಮತ್ತು ಶಾಂತಿಯನ್ನು ದೇವರು ಕೊಟ್ಟೇ ಕೊಡುವವನು ಎಂಬ
ಸಂಪೂರ್ಣ ವಿಶ್ವಾಸ ವಿಶ್ವವ್ಯಾಪ್ತಿಯಾಗಿದೆ. ಮಾನವನ ಒಳ ಅವ-
ಯವಗಳು ಏಕರೀತಿಯವಾಗಿದ್ದರೂ, ಬಾಹ್ಯ ಲಕ್ಷಣಗಳು ಅಸಂಖ್ಯ.
ಅವನ ಆಲೋಚನೆಗಳು, ಚಿಂತನೆ, ಭಾವನೆ, ಕಲ್ಪನೆ, ಪ್ರತಿಷ್ಠೆ, ಭ್ರಮೆ,
ಅಭಿರುಚಿ, ಊಹೆ, ನಿರ್ಣಯ, ಟೀಕೆ, ವಿಭಿನ್ನ ಮತ್ತು ವಿಶಿಷ್ಟ.
ನಿರಾಕಾರನಿಗೆ ಮಾನವ ತನ್ನ ಗುಣಗಳಿಗೆ ತಕ್ಕಂತೆ ಅನೇಕ ಆಕೃತಿ, ಚಿಹ್ನೆ
ಲಾಂಛನಗಳನ್ನು ಜೋಡಿಸಿದ್ದಾನೆ. ಈ ವೈವಿಧ್ಯಮಾನತೆ-ಸೃಷ್ಟಿಕರ್ತನ
ಅಪಾರ ಮಹಿಮೆ, ಅನಂತಾನಂತ ಶಕ್ತಿ, ಸರ್ವ ವ್ಯಾಪಕತೆ, ಸರ್ವಜ್ಞತ್ವ
ಮತ್ತು ಸರ್ವತ್ರ ಗೋಚರತೆಗಳನ್ನು ನಿರ್ದೇಶಿಸುತ್ತದೆ.

## ನೇತಿ – ನೇತಿ

ನಮ್ಮ ಪ್ರಾಚೀನ ಋಷಿಗಳಲ್ಲಿ ಅತ್ಯಂತ ಮೇಧಾವಿಯಾದ ಯಾಜ್ಞ
ವಲ್ಕ್ಯರು ದೈವ ವಿವರಣೆಯನ್ನು ನೇತಿ-ನೇತಿ (ಇದಲ್ಲ-ಇದಲ್ಲ) ಎಂಬ
"ನ" ಕಾರಗಳ ಸರಣಿಯಿಂದಲೇ ಸಾಧ್ಯವೆಂದು ಸಾರಿದರು.

ಸಜೀವ ಮತ್ತು ನಿರ್ಜೀವ, ಇಂದ್ರಿಯ ಚೈತನ್ಯವುಳ್ಳವು ಮತ್ತು ಇದ
ಲ್ಲವು, ಇವೆಲ್ಲಾ ಕೂಡಿದ ಪೂರ್ಣ ಪ್ರಪಂಚವೇ ದೇವರು.

ಅವನು ದೋಷರಹಿತ, ಅನಂತ ಮತ್ತು ಆದಿ, ಅಂತ್ಯಗಳಿಲ್ಲದವನು
ಅಂತರಾತ್ಮನಾಗಿ ಸೃಷ್ಟಿಯ ಸರ್ವಕಾರ್ಯಗಳನ್ನೂ ಒಳಗಿನಿಂದಲೇ ನಡೆ

ಸುವ ನಿಯಂತ್ರಕ. ಅವನು ಅಪರಾಧೀನ. ಮಿಕ್ಕೆಲ್ಲವೂ ಅವನ ಅವಲಂಬಿಗಳು ಎಂಬುದು ಅನೇಕ ಆಚಾರ್ಯವರ್ಯರ ವಿವರಣೆ.

ಅನಂತ ಮತ್ತು ಸನಾತ ಪುರುಷನ ಎಲ್ಲಾ ತರಹದ ವಿವರಣೆಗಳೂ ಸತ್ಯತೆಗೆ ಬಹುದೂರ. ದೇವರೇ ಬಲ್ಲ ತಾನು ಏನು ಎಂಬುದನ್ನು, ಎಂಬ ಹೃತ್ಪೂರ್ವಕ ಬುದ್ಧಿವಾದವನ್ನು ಹಿರಿಯರು ಆದಿಯಿಂದ ಕೊಡುತ್ತಲೇ ಬಂದಿದ್ದಾರೆ. ಆದರೂ ದೇವರ ವಿವರಣೆಗಳಿಗೆ ಅಂತ್ಯವಿಲ್ಲ. ಅದು ಸದಾ ನಿರ್ಣಯವಿಹೀನ ಮತ್ತು ಅಪೂರ್ಣವಾಗಿಯೇ ಮುಂದುವರಿಯುತ್ತಿದೆ. ವ್ಯಾಸ ಮಹಾ ಋಷಿಗಳು ಸಂಗ್ರಹಿಸಿರುವ ಹದಿನೆಂಟು ಪುರಾಣಗಳು, ದೇವರು ಏನು ಎಂಬುದನ್ನು ಅಂತಿಮವಾಗಿ ತಿಳಿಸಿಲ್ಲ. ದೇವರು ಸರ್ವಸೃಷ್ಟಿಕರ್ತ, ಅನಂತಶಕ್ತ, ಅಪಾರ ಮಹಿಮೆ, ಸರ್ವಶಕ್ತ, ಸರ್ವಗೋಚರ ಮತ್ತು ಸರ್ವಜ್ಞ - ಎಂಬುವೇ ಅವರ ವಿವರಣೆ.

ಪ್ರಕೃತ ಕಾಲದ ಯೋಗಿವರ್ಯ, ಪೂಜ್ಯ ಸ್ವಾಮಿ ಚಿದ್ಭವಾನಂದರು ದೈವ ಸ್ಪಷ್ಟೀಕರಣ ಈ ರೀತಿ ಕೊಟ್ಟಿದ್ದಾರೆ : ತನ್ನ ಸ್ವಾತಂತ್ರ್ಯ ಸ್ಥಿತಿಯಲ್ಲಿ, ದೇವರು ನಮ್ಮ ಮನಸ್ಸಿನ ಮತ್ತು ಮಾತಿನ ವ್ಯಾಪ್ತಿಗೆ ನಿಲುಕನು. ವಿವರಣಾ ಮಿತಿಗೆ ಬಾರನು. ವಿಶ್ವದ ನೈಸರ್ಗಿಕ ರೂಪದಲ್ಲಿ, ಪ್ರಕೃತಿ ಸೌಂದರ್ಯದಲ್ಲಿ ಜಗದಂತರ್ಯಾಮಿಯಾಗಿ ದೇವರು, ಸತ್ ಚಿದಾನಂದ-ಅಸ್ತಿತ್ವ-ಜ್ಞಾನ-ಆನಂದ ಸ್ವರೂಪನಾಗಿ ಪ್ರತ್ಯಕ್ಷನಾಗಿದ್ದಾನೆ. ಪ್ರಕೃತಿಯೇ ದೇವರು.

ಯಾವುದು ಆಕಾಶ-ಕಾಲ-ಕಾರಣಗಳನ್ನು ಮೀರಿದೆಯೋ ಅದೇ ಸತ್ ಅಥವಾ ಸತ್ಯ. ಆದರೂ ಸತ್ಯ, ಆಕಾಶ-ಕಾಲ-ಕಾರಣಗಳಿಗೆ ಸಿಕ್ಕಿಹಾಕಿಕೊಂಡಂತೆ ತೋರಿ, ಪರಿಮಿತಿಯು ಮತ್ತು ಅಧೀನ ವಸ್ತುಗಳ ಸೃಷ್ಟಿ ಕಾಣುತ್ತದೆ. ಇದರ ಪರಿಣಾಮವೇ ವ್ಯಕ್ತವಾದ ಜೀವಾತ್ಮ ಅಥವಾ ಆತ್ಮ. ಇವು ಎಡ-ಬಿಡದ ಕಾರ್ಯಗಳಲ್ಲಿ ಮಗ್ನವಾಗುತ್ತವೆ. ಕಾರ್ಯಗಳು, ಇಚ್ಛೆ, ಬಯಕೆ ಅಥವ ಆಸೆಯ ಪರಿಣಾಮ. ವಿಶ್ವೇಶ್ವರನ ಇಚ್ಛೆಯೇ ಸರ್ವಸೃಷ್ಟಿಗೆ ಕಾರಣ. ದೈವಾಂಶಗಳಾದ ಆತ್ಮ-

ಗಳು ಜೀವಿಸಲು ಸಾಧಿಸುತ್ತವೆ. ಇದೇ ಸತ್.

ಮನೋಭಾವ ಅಥವಾ ಚಿತ್ತವೃತ್ತಿ ಜೀವದ ಸಹವರ್ತಿ. ಸ್ನೇಹ, ವಿಶ್ವಾಸ ಸಮರ್ಥನೆ, ಸಾರ್ಥಕತೆ ಮತ್ತು ಮೆಚ್ಚಿಕೆಗಳು, ಭಾವನೆಗಳ ಗಣ್ಯರೂಪ. ಇವು ಪುರೋವೃದ್ಧಿಗೆ ಮತ್ತು ವಿಕಾಸಿಕೆಗೆ ಕಾರಣವಾದ ದೈವಸ್ವರೂಪ. ಇದಕ್ಕೆ ವ್ಯತಿರಿಕ್ತವಾದ ದ್ವೇಷ, ಅಡ್ಡಿ, ಆತಂಕ, ಅಸೂಯೆ, ವಿರೋಧ, ವೈರತ್ವ ಮುಂತಾದ ನಿಷೇಧಾರ್ಥಕ ಗೌಣ ಗುಣಗಳು, ಪ್ರಗತಿಯನ್ನು ಕುಂಟು ಮಾಡುತ್ತವೆ. ಭಾವನೆಗಳನ್ನು ಹಿಮಾಲಯದಷ್ಟು ಉನ್ನತ ಸ್ಥಿತಿಗೇರಿಸಿದಾಗ ಮಾತ್ರ ಜೀವನ ಸಾರ್ಥಕ ಇಂಥ ನಿಸ್ವಾರ್ಥ ಜೀವನ, ಮಧುರತೆ, ಸ್ವರ್ಗಸುಖ ಅಥವಾ ಆನಂದವನ್ನು ನಿರ್ಮಿಸುತ್ತವೆ.

ಜೀವಿಗೆ ತನ್ನ ಇರುವಿಕೆಯು ತನಗೆ ಗೊತ್ತು. ಈ ಗ್ರಹಣಾ ಶಕ್ತಿ ಚಿಂತನಾ ಶಕ್ತಿ – ಮಾನವನಿಗೆ ದೈವ ಕೊಡುಗೆ. ಈ ಗ್ರಹಣ ಶಕ್ತಿಯು ತೀವ್ರತೆ ವ್ಯಕ್ತಿಯಿಂದ ವ್ಯಕ್ತಿಗೆ ವ್ಯತ್ಯಾಸವಿದೆ. ಗ್ರಹಣಾ ಶಕ್ತಿಗೂ, ಭಾವನಾ ಶಕ್ತಿಗೂ ನಿಕಟ ಸಂಬಂಧ. ಬುದ್ಧಿ, ಪ್ರಜ್ಞೆ, ಅರಿವು, ಗ್ರಹಣ ಧರ್ಮ, ಆತ್ಮತಾ ಜ್ಞಾನ, ಜಾಗೃತಾವಸ್ಥೆಗಳೆಲ್ಲಾ ಮನಃಶಕ್ತಿಯ ವಿವಿಧ ರೂಪಗಳು. ಆತ್ಮತಾ ಜ್ಞಾನ ಪಡೆದಿರುವ ಮಾನವ ಸಾಮ್ರಾಜ್ಯ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ. ಬಾಕಿ ಜೀವ-ಜಂತುಗಳಿಗೆ ಜ್ಞಾನ ಇದೆ. ಆದರೆ ಆತ್ಮತಾ ಜ್ಞಾನವಿಲ್ಲ ಮಾನವ ಕುಲ ಒಂದೇ, ಆತ್ಮತಾಜ್ಞಾನ ಹೊಂದಿ, ಚಿಂತನಾಶೀಲತೆ ಪಡೆದು, ಪರಸ್ಪರ ವ್ಯತ್ಯಾಸ ಮತ್ತು ಹೋಲಿಸುವ ಶಕ್ತಿ ಹೊಂದಿ, ವಸ್ತುಗಳ ಮತ್ತು ಘಟನೆಗಳ ಬೆಲೆಕಟ್ಟಿ ನಿರ್ಣಯ ಕೈಗೊಳ್ಳುವ ಶಕ್ತಿವುಳ್ಳದ್ದು. ದೈವ ಕಲ್ಪನೆ ಮಾನವ ಕುಲ ಒಂದಕ್ಕೇ ಸಂದಿರುವ ಸುಯೋಗ. ದೈವ ಪ್ರಜ್ಞೆಯ ಜ್ಯೋತಿ ಮಾನವ ಹೃದಯದಲ್ಲಿ ನೆಲಸಿದೆ. ಮಾನವನ ಜ್ಞಾನದ ಪರಿಶುದ್ಧತೆ ಹೆಚ್ಚಿದಂತೆ ಅಂತರ್ಜ್ಯೋತಿ ಪ್ರಜ್ವಲಿಸುತ್ತದೆ. ಆಗ ಮಾನವ ದೈವತ್ವವನ್ನು ಹೊಂದುತ್ತಾನೆ, ಸಂಪೂರ್ಣತೆಯನ್ನು ಪಡೆಯುತ್ತಾನೆ. ತನ್ನ ಬಾಳಿನ ಮೂಲಕ ದೇವರ ವಿವರಣೆಯನ್ನು ಅರ್ಥೈಸುತ್ತಾನೆ.

ಮಾನವನಿಗೆ ಹಸಿವು, ದಾಹ, ಕಾಮ, ಆನಂದ ಮುಂತಾದ ಪ್ರಚೋ-
ದನೆಗಳು ಹಲವಾರು. ಅವುಗಳ ತುಷ್ಟಿಗೆ ಯೋಗ್ಯ ವಸ್ತುಗಳು ನಿರ್ಮಿ
ಸಲ್ಪಟ್ಟಿವೆ. ಸಂತೋಷ, ಶಾಶ್ವತ ಕೀರ್ತಿ, ಸ್ವಾತಂತ್ರ್ಯ, ಸಂಪೂರ್ಣ
ಆನಂದ, ದೇವರು ಇವುಗಳೆಲ್ಲದರ ಭಂಡಾರ. ಭಗವಂತ, ಧರ್ಮ, ಅರ್ಥ,
ಕಾಮ, ಮೋಕ್ಷಗಳ ಕೋಠಿ ಮಾನವ ಸದಾಚಾರದಿಂದ ತನ್ನ ಘನತೆ
ಯನ್ನು ಹೆಚ್ಚಿಸಿಕೊಂಡಾಗ ಆ ಭಂಡಾರದ ಒಡೆಯನಾಗಬಹುದು. ಇದ
ಕ್ಕಿಂತ ಗ್ರಾಹಕ ಮತ್ತು ಸರ್ವವ್ಯಾಪಕ ಸ್ಪಷ್ಟನೆ ಸಾಧ್ಯವಿಲ್ಲವೆನ್ನುತ್ತಾರೆ
ಪೂಜ್ಯರು

ದೇವರ ಕಲ್ಪನೆ ಮನುಷ್ಯನಿಂದ ಮನುಷ್ಯನಿಗೆ ಭಿನ್ನವಿದೆ. ಸರ್ವೇಶನ
ಕಲ್ಪನೆ ಅಸಂಖ್ಯ ಮನುಷ್ಯನ ಮನಸ್ಸು ವಿಕಾಸ ಹೊಂದಿದಂತೆ, ಅವನ
ದೈವ ಭಾವನೆ ಉನ್ನತವಾಗುತ್ತಾ ಹೋಗುತ್ತದೆ ಮನುಷ್ಯತ್ವಾ
ರೋಪಣದ ಕಲ್ಪನೆಗಳಿಂದ ದೇವರ ಅನಂತತೆ, ಅದ್ವಿತೀಯತೆ ಮತ್ತು
ನಿತ್ಯತೆಯ ಭಾವನೆಗಳು ಬದಲಾಗುತ್ತವೆ.

## ಭಾವನಾರೂಪ

ದೈವ ಅಸ್ತಿತ್ವವನ್ನು ಸಿದ್ಧಾಂತಗೊಳಿಸುವುದು ಅಸಾಧ್ಯ ಬೈಬಲ್ಲಿನ
ಪ್ರಕಾರ ಮಾನವನಿಗೆ ದೈವ ದರ್ಶನ ಅಸಾಧ್ಯ. ದೇವರನ್ನು ನೋಡಿ
ಬದುಕಿರುವ ಮಾನವನಿಲ್ಲ. ಶರೀರದ ಒಳನೋವುಗಳಂತೆ ಭಗವಂತ
ಅಗೋಚರ ಅದು ಭಾವನಾರೂಪವಾದರೂ ಮನಃಕಲ್ಪಿತ ಭ್ರಾಂತಿ
ಯಲ್ಲ ದೇವರಿಗಾಗಿ ಕಾತುರತೆ, ದರ್ಶನ, ಆತ್ಮೀಯತೆ ಮತ್ತು
ಅನ್ಯೋನ್ಯತೆಗಳು ಜೀವನದ ಗುರಿ ಮತ್ತು ಸಫಲತೆ.

ವೈಜ್ಞಾನಿಕ ಪ್ರಯೋಗಗಳಿಂದ ಅವನ ಇರುವಿಕೆಯನ್ನು ನಿರ್ಧರಿ-
ಸುವುದು ಅಸಾಧ್ಯ. ಪರಮೇಶ್ವರ ಘನಪಂಡಿತರನ್ನು ದಿಗ್ಭ್ರಮೆ
ಗೊಳಿಸಿ ಅತೀ ಬಲಿಷ್ಠರ ಹಿಡಿತಕ್ಕೆ ದೊರಕದೇ ಇರುವವನು. ದೇವರೇ
ನಮ್ಮ ಜ್ಞಾನೇಂದ್ರಿಯಕ್ಕೆ ಹೋರು, ನಮ್ಮ ಮನಸ್ಸಿಗೆ ಅರಿವು, ನಮ್ಮ

ಬುದ್ಧಿಗೆ ಗ್ರಹಣ, ತ್ರಾಣ ಮತ್ತು ಸರ್ವಾಂಗಳಿಗೆ ಸಾಮರ್ಥ್ಯ ಕೊಡು ತ್ತಿರುವ ಅವ್ಯಕ್ತ ಸತ್ವದಾತ. ಭಾವನೆಗಾಗಿ ಹೃದಯ, ವಿಚಾರಕ್ಕಾಗಿ ಮೆದುಳು, ಮರಗುವುದಕ್ಕಾಗಿ ಮನಸ್ಸು, ನಿಸ್ವಾರ್ಥತೆಯ ಕಾರ್ಯ ಗಳಿಗಾಗಿ ಕೈಕಾಲುಗಳನ್ನು ಪಡೆದಿದ್ದೇವೆ. ನಮ್ಮ ಹೃದಯ ಸ್ಪಂದನದ ಪ್ರತಿಯೊಂದು ಮಿಡಿತ, ಒಳಗೆ ಹೋಗುವ, ಹೊರಕ್ಕೆ ಬರುವ ಉಸಿರು ಮನಸ್ಸಿನಿಂದ ಹೊರಬರುವ ಪ್ರತೀ ಆಲೋಚನೆ- ಇವುಗಳೆಲ್ಲಾ ದೇವರು ನಮ್ಮಲ್ಲೇ ಐಕ್ಯವಾಗಿದ್ದಾನೆ ಎಂಬುದನ್ನು ಸಮರ್ಥಿಸುತ್ತದೆ. ನಮ್ಮಿಂದ ಅವನು ಹೊರಗಿಲ್ಲ. ಅವನಿಂದ ನಾವು ಹೊರಗಿಲ್ಲ. ಅವನು ನಮ್ಮ ಆತ್ಮದ ಆತ್ಮ - ಅಂತರಾತ್ಮ , ಆಂತರಿಕ ಚಕ್ರಾಧಿಪತಿ. ಅವನು ಜ್ಞಾನ, ಇಚ್ಛೆ ಮತ್ತು ಕ್ರಿಯೆಗಳ ಸಂಯೋಗ ವಿಶ್ವದ ಚಲನ-ವಲನಗಳ ಕಾರಣಕರ್ತ. ಹಾರದ ಪ್ರತಿಯೊಂದು ಹೂವಿನಲ್ಲೂ ದಾರ ಹೊಕ್ಕಿರುವಂತೆ, ಎಣ್ಣೆ ಬೀಜದಲ್ಲಿರುವಂತೆ, ಬೆಣ್ಣೆ ಹಾಲಿನಲ್ಲಿರುವಂತೆ, ಮನಸ್ಸು ಮೆದುಳಿನಲ್ಲಿ ಗುಪ್ತವಾಗಿರುವಂತೆ, ಸರ್ವ ಜೀವ ಜಂತು ಗಳಲ್ಲೂ, ಪ್ರತಿ ನಿರ್ಜೀವ ವಸ್ತುಗಳಲ್ಲೂ ದೇವರು ಸುಪ್ತನಾಗಿದ್ದಾನೆ. ಪ್ರತಿಯೊಂದು ವಸ್ತುವಿನಲ್ಲೂ ಒಡೆಯನ ಮುಖದ ಅಪ್ಪುತವನ್ನು ಕಾಣಬಹುದು ಈ ಬ್ರಹ್ಮಾಂಡವೇ ಅಮರನಾದ ಬ್ರಹ್ಮನಿಂದ ಕೂಡಿದೆ. ಆಸ್ತಿಕ, ನಾಸ್ತಿಕ, ಜ್ಞಾನಿ, ಅಜ್ಞಾನಿ, ವಿಜ್ಞಾನಿ ಮತ್ತು ವಿಶ್ವದ ಪ್ರತೀ ಘಟಕದಲ್ಲೂ ಆತ್ಮನಾಗಿ ದೇವರಿದ್ದಾನೆ. ನಾಸ್ತಿಕ ಒಲ್ಲೇ ಎಂದರೂ, ಓಂಕಾರನ ನೆಲೆ ಇಲ್ಲದೆ ಇಲ್ಲ. ನಾಸ್ತಿಕತೆ, ಸ್ಥಿರೀಕರಣ ಮತ್ತು ನಿರಾ ಕರಣೆಯ ಬರೀ ಪಾಂಡಿತ್ಯ. ದೇವರೆಂಬ ಕಲ್ಪನೆಯ ಅರ್ಥ ಗ್ರಹಿಸಲು ಶ್ರದ್ಧಾಪೂರ್ವಕವಾದ ಪ್ರಯತ್ನ ಪಡೆದಿರುವ ಆಸ್ತಿಕನೂ ಕೂಡಾ ನಾಸ್ತಿಕನೇ. ತನ್ನನ್ನು ತಾಮ ನಿರಾಕರಿಸದೆ ದೇವರ ನಿರಾಕರಣೆ ನಿಷೇಧ. ಹಾಗೇ ತನ್ನನ್ನು ತಾನು ಸ್ಥಿರೀಕರಿಸದೆ ದೇವರ ಸ್ಥಿರೀಕರಣ ಅಸಾಧ್ಯ.

ಮಹಾಲಿಂಗರಂಗ ಕವಿಯು ಅನುಭವಾಮೃತದಲ್ಲಿ ದೇವರ ಸ್ವಭಾವ-ವನ್ನು ನಿರ್ದಿಷ್ಟವಾಗಿ ನಿಷ್ಕರ್ಷಿಸಿದ್ದಾರೆ.

# ಅಧ್ಯಾಯ–ಜೀವನ್ಮುಕ್ತಿ ನಿರೂಪಣಾ

ಬ್ರಹ್ಮವಿದು ನೋಡೆಂದು ತೋರಲು ।
ಬ್ರಹ್ಮ ಮೊದಲಾದವಂಗಳವೇ ? ।
ಹಮ್ಮು ಮೊದಲಾದಖಿಳವಲ್ಲದುದೊಂದು ಪೇಳುವರು ; ॥
ತಮ್ಮ ನಿಜವದು ಬೇರೆ ವಸ್ತುವೆ ? ।
ತಮ್ಮ ತಮ್ಮನುಭವಕೆ ಗೋಚರ ; ।
ತಮ್ಮ ಹೆಗಲೇರುತ್ತ ತಾವೇ ನಡೆಯುಲಳವಹುದೆ ? ॥ ೬೮ ॥

ಬುದ್ಧಿಯಿಂ ಪರವಸ್ತುವಹೆಯೆಂ ।
ದುದ್ಧರಿಸಿ ಗೀತೆಯುಲಿ ಪಾರ್ಥಗೆ ।
ಸಿದ್ಧವತ್ಕರಿಸಿದನು ತಿಳಿ ನೀನೆಂದು ಶ್ರೀಕೃಷ್ಣ ; ॥
ನಿರ್ಧರಿಸಲಿದು ಬ್ರಹ್ಮವೆಂದಲೆ ।
ಬುದ್ಧಿವಂತನೆ ತೋರಿದನೆ ? ತಾ ।
ನದ್ವಯುಸ್ವಾತ್ಮೈಕವೇದ್ಯವೆನಿಪ್ಪ ವಸ್ತುವನು ॥ ೬೯ ॥

ಶ್ರುತಿಗುರುಗಳಿಂ ಮಥಿಸಿ, ನೆರೆ ಸಿ ।
ಕ್ಕಿತವಿದೆಂಬನುಭವಪ್ರಮಾಣವೆ ।
ಮತಿಯಾಧೀನವದೆನಿಸಿಕೊಂಡೇ ತೋರಗುತಿರ್ಪಗ ॥
ಇತರವೆನಿಪ ಪ್ರಮಾಣವೆಂತೋ ? ।
ಮತಿಗವಿಷಯನು ; ವಾಗಗೋಚರ ; ।
ಸುತನೆ, ಆತ್ಮವಿದೆಂದು ತೋರಿಸಲಳವೆ ಪೇಳೆಂದ ॥ ೫೦ ॥

ಮತಿಗಗೋಚರವಾದ ವಸ್ತುವ ।
ನಿತರವೆನಿಪ ಪ್ರಮಾಣಗಳು ನಿ ।
ಕ್ಕಿತವ ಮಾಡ ಸಮರ್ಥವಲ್ಲವತೀಂದ್ರಿಯುವದಾಗಿ ; ॥

ಶ್ರುತಿಗಳರುಪಿದ ತೆರದಿ, ಸದ್ಗುರು ।
ಕೃತಮಹಾನುಗ್ರಹದಿ । ತಿಳಿಯು ।
ಲ್ಕತುಲವಾದಪರೋಕ್ಷದನುಭವದಿಂದಲಲದು ವೇದ್ಯ ॥ ೫೧ ॥

ಜ್ಞಾನದಾಶ್ರಯದಿಂದ ಪ್ರತ್ಯ ।
ಕ್ಷಾನುಮಾನಾದಿಪ್ರಮಾಣವು ; ।
ಜ್ಞಾನವನು ನೆರೆ ಬಿಟ್ಟವಕ್ಕೆ ಸ್ವತಂತ್ರವಿಲ್ಲವೆನೆ ।
ಜ್ಞಾನದಾಧೀನಂಗಳದರಿಂ ।
ಜ್ಞಾನದಿಂದಧಿಕ ಪ್ರಮಾಣಗ ।
ಳೇನುಮಿಲ್ಲಾ ಜ್ಞಾನ ತಾನೇ ಸ್ವಾನುಭವವೇದ್ಯ ॥ ೫೨ ॥

ಅದ್ವಯಾನಂದಾಮೃತಾಬ್ಧಿಯೊ ।
ಳದ್ದಿ ತಾನಾಗಿದ್ದು ತೋರುವ ।
ಸಿದ್ಧ ಸುಮ್ಮನೆಯಿದ್ದು ಪೋಪನು ಮೂಕನಂದದಲಿ ; ॥
ಉದ್ಧರಿಸಿ ಶ್ರುತಿಶಿರಗಳಾತ್ಮನ ।
ಹೊದ್ದಲರಿಯದೆ ತಾವೆ ತಮ್ಮೊಳು ।
ಬದ್ಧಮೌನದಲಿರ್ಪುವದರಿಂ ವಾದವೇಕೆಂದ ॥ ೫೩ ॥

ಶಿಷ್ಯನಿಗೆ ವೇದ ಕಲಿಸಿದ ಗುರುಗಳ ಸ್ವಷ್ಟ ಸಂಬೋಧೆ – ತಾಯಿಯೇ ದೇವರೆಂದು ತಿಳಿ ತಂದೆ ದೇವರೆಂದು ಬಗೆ. ಆಚಾರ್ಯ ದೇವರೆಂದು ತಿಳಿ. ಅತಿಥಿ ದೇವರೆಂದು ತಿಳಿ.

## ಗೌತಮ ಬುದ್ಧ

ಸರ್ವರ ದುಃಖ ಪರಿಹಾರ ಮಾರ್ಗಕ್ಕೋಸ್ಕರ, ಚಕ್ರವರ್ತಿಯ ಪದವಿ ತ್ಯಾಗ ಮಾಡಿ ಸ್ವಪ್ರೇರಣೆಯಿಂದ ಜ್ಞಾನಿಯಾದ. "ದೇವರನ್ನು ಕುರಿತ ನಿಮ್ಮ ಯಾವ ಸಿದ್ಧಾಂತವೂ ನನಗೆ ಬೇಕಿಲ್ಲ. ಆತ್ಮನನ್ನು ಕುರಿತು ಅಷ್ಟು ಸೂಕ್ಷ್ಮವಾಗಿ ವಿವೇಚಿಸುವುದರ ಪ್ರಯೋಜನವೇನು?

ಒಳ್ಳೆಯದನ್ನು ಮಾಡಿರಿ, ಒಳ್ಳೆಯವರಾಗಿರಿ, ಇದಿಷ್ಟೇ ನಿಮ್ಮನ್ನು ವಿವೇಚನೆಗೊಳಿಸುತ್ತದೆ, ಸತ್ಯದ ಕಡೆಗೆ ಒಯ್ಯುತ್ತದೆ. ಎಲ್ಲಿಯೋ ಬರೆದಿವೆ. ಎಂದು ನಂಬಬೇಡಿ. ರಾಷ್ಟ್ರೀಯ ಪರಂಪರೆ ಇದೆ ಎಂದು ನಂಬಬೇಡಿ. ಚಿಕ್ಕಂದಿನಿಂದಲೂ ನಂಬುವಂತೆ ಮಾಡಲಾಗಿದೆಯೆಂದು ನಂಬಬೇಡಿ. ಎಲ್ಲವನ್ನೂ ತರ್ಕಕ್ಕೆ ಒಳಪಡಿಸಿ ವಿಶ್ಲೇಷಿಸಿ. ಪ್ರತಿಯೊಬ್ಬನಿಗೂ ಅದು ಒಳ್ಳೆಯದೆಂದು ನಿಮಗೆ ಅನ್ನಿಸಿದಾಗ ಮಾತ್ರ ನಂಬಿರಿ. ಅದರಂತೆ ಬಾಳಿರಿ, ಹಾಗೆಯೇ ಇತರರು ಬಾಳಲು ನೆರವಾಗಿ".

"ತಮಗೆ ತಾವೇ ದಾರಿದೀಪಗಳಾಗುತ್ತಾರೋ, ತಮಗೆ ತಾವೇ ಆಶ್ರಯದಾತರಾಗುತ್ತಾರೋ, ಇನ್ನಾರ ಆಶ್ರಯವನ್ನು ಬೇಡುವುದಿಲ್ಲವೋ, ಸತ್ಯವನ್ನೇ ಆಶ್ರಯವೆಂದು ತಿಳಿದು, ಅದನ್ನೇ ಎಡೆಬಿಡದೆ ಪಾಲಿಸಿ, ಆಶ್ರಯಕ್ಕಾಗಿ ತಮಗೆ ತಾವೇ ಅಲ್ಲದೆ ಇತರರ ಕಡೆಗೆ ನೋಡುವುದಿಲ್ಲವೋ ಅವರು ಮಾತ್ರ ಆನಂದ. ತನಗೆ ತಾನೇ ಜಾಗೃತನಾಗಿದ್ದು ಎಚ್ಚರಿಕೆಯಿಂದ ಕಳಂಕರಹಿತ ಕ್ರಿಯೆಗಳಲ್ಲಿ ತೊಡಗಿ, ಯಾರು ನಿಗ್ರಹಶೀಲನಾಗಿ ಋಜು ಜೀವನವನ್ನು ನಡೆಸುತ್ತಾನೊ ಅತನ ಘನತೆ ನಿರಂತರವಾಗಿ ಹೆಚ್ಚುತ್ತದೆ. ತನ್ನನ್ನು ತಾನೇ ನಿಗ್ರಹಗೊಳಿಸಿಕೊಂಡು, ತನಗೆ ತಾನೇ ಅಧೀನನಾಗುವುದರ ಮೂಲಕ, ಎಚ್ಚರಗೊಳ್ಳುವವನೊಬ್ಬ ಯಾವ ಪ್ರವಾಹಕ್ಕೂ ಜಗ್ಗದ ದ್ವೀಪವಾಗಿ ಪರಿವರ್ತಿತನಾಗುತ್ತಾನೆ."

ಆಧುನಿಕ ಮಾನವನಿಗೆ ಇದು ಎಂಥ ಶ್ರೇಷ್ಠ ಬೋಧನೆ ತನ್ನ ದೇಹ ಪೋಷಣೆ, ರಕ್ಷಣೆ ಮತ್ತು ಇತರ ಪ್ರತಿಯೊಂದು ಕಾರ್ಯವನ್ನು ಇನ್ನೊಬ್ಬರು ಮಾಡಿಕೊಡಬೇಕು. ತಾನೇ ಮಾಡಿಕೊಳ್ಳುವುದು ತನ್ನ ಅಂತಸ್ತಿಗೆ ಸಲ್ಲದು ನೂರಾರು ಆಸೆ, ಆಶೋತ್ತರಗಳಿಂದ ಬಂಧಿತನಾಗಿ ತನ್ನ ವ್ಯಕ್ತಿ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಹಾಳು ಮಾಡಿಕೊಂಡಿದ್ದಾನೆ. ಅಧಿಕಾರ ಪಡೆಯಲು ಮತ್ತು ಅದನ್ನು ಉಳಿಸಿಕೊಂಡು ಹೋಗಲು, ತನ್ನ ಆತ್ಮಗೌರವವನ್ನು ಒತ್ತೆ ಇಡುವುದು ಸಾಮಾನ್ಯವಾಗಿದೆ. ತೃಪ್ತಿ, ತ್ಯಾಗ ಸೇವಾ ಮನೋಭಾವದಿಂದ,

ಒಂದು ದೊಡ್ಡ ಆದರ್ಶಕ್ಕಾಗಿ, ಸ್ವತಂತ್ರವಾಗಿ ಬಾಳುವವರ ಸಂಖ್ಯೆ ಅತಿ ವಿರಳವಾಗುತ್ತಿರುವುದು ಬಹು ವಿಷಾದಕರ.

ವಿವಾಹಿತನಾಗಿದ್ದರೂ, ವಿಪತ್ತುಗಳಿಗಲ್ಲದೆ, ವಿವಿಧ ವಿನೋದ, ವಿಹಾರ ಮತ್ತು ವಿಲಾಸಗಳಿಗೆಲ್ಲಾ, ಜನ್ಮದಾತರನ್ನು ಮತ್ತು ಕನ್ಯಾದಾನಿಗಳನ್ನು ಹೊಣೆ ಮಾಡುವುದು ಸಾಮಾನ್ಯವಾಗಿದೆ. ಕುಟುಂಬದ ಐಕ್ಯತೆ, ಘನತೆ, ಪ್ರೀತಿ, ವಿಶ್ವಾಸ, ನೆಂಟು ಈ ಅಮೂಲ್ಯ ಮೌಲ್ಯಗಳು ಗಂಟನ್ನು ಅವಲಂಬಿಸುವ ಅಪೇಕ್ಷೆ ಅಪಾರವಾಗುತ್ತಿದೆ. ವಿಶೇಷಾಧಿಕಾರ ಮತ್ತು ಗೌರವಗಳ, ಆಸೆ-ಆಕಾಂಕ್ಷೆಗಳ ಬಂದಿಗೆ, ಪರ ಆಶ್ರಯ ಮತ್ತು ಆಧೀನತೆ ಅನಿವಾರ್ಯ. ಪರಾಧೀನನ, ಸಹಜ ಸಾಹಸ, ಸಾಮರ್ಥ್ಯ, ಪ್ರಾಯ, ಶಕ್ತಿ, ಕೌಶಲ್ಯ, ಬುದ್ಧಿ ಶಕ್ತಿ, ವಿಚಾರಶೀಲತೆಗಳೆಲ್ಲ ಕುಂಠಿತ ವಾಗುತ್ತವೆ. ವೃದ್ಧ ಮಾತಾ-ಪಿತೃಗಳ ಆಶಾಭಂಗ, ವ್ಯಥೆಗಳು ವರ್ಣನೆಗೆ ಮೀರಿದವು. ಹೆಣ್ಣು, ಪ್ರೀತಿ, ಕ್ಷಮೆ, ವಿಶ್ವಾಸ, ಶ್ರಮ, ಸಹನೆ, ಕರುಣೆ,ತಾಳ್ಮೆ, ಹೊಂದಾಣಿಕೆ ಮುಂತಾದ ಸತ್ಸಂಪ್ರದಾಯಗಳ ಭಂಡಾರ. ಸ್ತ್ರೀಯ ಪ್ರೋತ್ಸಾಹ ಮನೋಭಾವ ದೈವ ಕೊಡುಗೆ. ಹೆಣ್ಣು ಎರಡು ಸಂಸಾರಗಳ ಮಧ್ಯದ ಕಂದಕವನ್ನು ದಾಟುವ ಸೇತುವೆ ಯಾಗಿ, ಹೆಣ್ಣಿನ ಶ್ರೇಷ್ಠತೆಯನ್ನು ಸ್ಥಾಪಿಸುವುದು ಶ್ರೇಯಸ್ಕರ. ಸ್ವತಂತ್ರತೆ, ಕಾಯಕ, ಹೊಣೆ ಹೊರುವ ಮನೋಭಾವ ಸಂಸಾರ ಸಮಾಜ ಮತ್ತು ರಾಷ್ಟ್ರದ ಪುರೋವೃದ್ಧಿಗೆ ಮೂಲ.

## ಗುರುನಾನಕ್

ಪ್ರಪಂಚಕ್ಕೆ ದೇವರಿಬ್ಬರಿಲ್ಲ. ಪ್ರೀತಿ ಮತ್ತು ಒಗ್ಗಟ್ಟೇ ದೇವರು. ಮಸೀದಿ, ಚರ್ಚ್, ಗುಡಿ, ಎಲ್ಲೆಡೆಗಳಲ್ಲೂ ಪೂಜಿಸುತ್ತಿರುವ ದೇವರು ಒಬ್ಬನೇ. ದೇವರ ದೃಷ್ಟಿಯಲ್ಲಿ ಸರ್ವ ಮಾನವರೂ ಸಮ. ಅವರ ಜನನ ಮರಣಗಳಲ್ಲಿ ಬೇಧವಿಲ್ಲ. ಹರ ಸೇವೆ, ನರಸೇವೆ ಎರಡೂ ಒಂದೇ.

# ಮಹಮದ್

ದೇವರಿಗೆ ಅಪಥ್ಯವಾದದ್ದನ್ನು ದೂರ ಮಾಡುವುದೇ ಇಸ್ಲಾಂ. ಪ್ರತೀ ಧರ್ಮಗಳಲ್ಲೂ ಒಳ್ಳೆಯದಿದೆ. ಹಸಿದವನಿಗೆ ಅನ್ನ ಮತ್ತು ಸರ್ವರ ಸತ್ಕಾರ ಪ್ರತಿಯೊಬ್ಬರ ಕರ್ತವ್ಯ. ಸರ್ವವೂ ತನಗೆ ಬೇಕೆಂಬುದು ಸಲ್ಲದು. ನೀನು ಇನ್ನೊಬ್ಬರಿಂದ ಬಯಸುವುದನ್ನು ಅವರಿಗೆ ನೀನು ಕೊಡು. ನಿಜವನ್ನೇ ನುಡಿ. ಮಾತಿಗೆ ತಪ್ಪಬೇಡ ಚಾಡಿಕೋರ ದೇವರ ವೈರಿ. ಅನ್ಯಾಯಕ್ಕೊಳಗಾದವನನ್ನು ಬೆಂಬಲಿಸು. ನಿನಗೆ ಇರುವ ಆಸೆ ಪರರಿಗೂ ಉಂಟು ಎಂಬುದನ್ನು ಮರೆಯದಿರು. ಸೋಮಾರಿಗೆ ದೇವರು ದಯತೋರನು.

# ಸ್ವಾಮಿ ವಿವೇಕಾನಂದ

ಪ್ರತೀ ಜೀವಿಯೊಳಗಿರುವ ಆತ್ಮದ ಆರಾಧನೆಯಿಂದಲೇ ಮುಕ್ತಿ ಎಂದು ವಿವೇಕಾನಂದರು ಘೋಷಿಸಿದರು. ಅವರ ಪ್ರಕಾರ ಯಾರೂ ದೇವರನ್ನು ಕಂಡಿಲ್ಲ. ಏಕೆಂದರೆ ದೇವರು ಅವರ ಮಗ ಕ್ರೈಸ್ತನ ರೂಪದಲ್ಲಿ ಕಾಣಿಸಿಕೊಂಡಿದ್ದಾನೆ. ನಾವು ದೇವರನ್ನು ನೋಡಲಾರೆವು. ದೇವರನ್ನು ನೋಡಲು ಪ್ರಯತ್ನಿಸಿದರೆ ದೇವರ ಹಾಸ್ಯಾಸ್ಪದ ವ್ಯಂಗ್ಯ ಚಿತ್ರವನ್ನಷ್ಟೇ ರೂಪಿಸುವೆವು. ಮನುಷ್ಯನಿಗಿಂತ ಭಿನ್ನವಾಗಿ ಅರ್ಥ ಮಾಡಿಕೊಳ್ಳಲಾರೆವು ದೇವರನ್ನು ಅರ್ಥ ಮಾಡಿಕೊಳ್ಳಬೇಕಾದರೆ ಮಾನವ ಸ್ತರವನ್ನು ಮೀರಿ ಎತ್ತರಕ್ಕೆ ಏರ-ಬೇಕು. ಆ ಉನ್ನತ ಮಟ್ಟದಲ್ಲಿ ಚರ್ಚಿಸಬೇಕು. ಅತೀ ಮಾನವರಾಗಬೇಕು. ಎಲ್ಲಿಯವರೆಗೂ ನಾವು ಮನುಷ್ಯರಂತೆ ಮಾತಾಡುತ್ತೇವೊ ಅಲ್ಲಿಯವರೆಗೆ ಮನುಷ್ಯರೂಪಿಯಾಗಿ ಮಾತ್ರ ದೇವರು ಕಾಣುತ್ತಾನೆ. ಮನುಷ್ಯನಿಗೆ ಆತ್ಮದ ಬಗ್ಗೆ ತಿಳುವಳಿಕೆ ಇಲ್ಲ. ತನ್ನ ದೃಷ್ಟಿಗೆ ಬಂದ ರೂಪವನ್ನೇ ಅವನು ಯೋಚಿಸುತ್ತಾನೆ ನೀಲಿ ಆಕಾಶ ವಿಸ್ತೃತವಾದ ಹಸಿರು ಹೊದಿಕೆಯ ಭೂಮಿ, ನೀಲಿ ಮತ್ತು ಎಲ್ಲೆಯಿಲ್ಲದ ಸಾಗರ - ಇಂಥ ಅಗಾಧವಾದ ವಸ್ತುಗಳಿಗೆ ದೈವಸ್ವರೂಪವನ್ನು ಸೃಷ್ಟಿಸಿರುತ್ತಾನೆ.

ವಿವೇಕಾನಂದರ ಅಭಿಪ್ರಾಯದಂತೆ, ದೈವ ಕಲ್ಪನೆ, ಸ್ವಸ್ಥ, ಶಾಂತಿ, ಸಮಾಧಾನ, ಸಂತೋಷ, ನೆಮ್ಮದಿ, ದುಃಖೋಪಶಮನ ಮುಂತಾದ ಹಿತಕರ ಶಕ್ತಿ ಹೊಂದಿದೆ ಮಾನವ ಕುಲದ ಬಯಕೆ, ಹಾರೈಕೆ, ಹೆಗ್ಗುರಿ, ಅಭಿಲಾಷೆ, ಭರವಸೆ, ನಂಬಿಕೆ ಮುಂತಾದ ಆಕಾಂಕ್ಷೆಗಳೆಲ್ಲಾ ದೇವರೆಂಬ ವಿಶಿಷ್ಟ ಪದದಲ್ಲಿ ಕೇಂದ್ರೀಕೃತವಾಗಿದೆ. ಎಲ್ಲಾ ವಿಧದ ಅದ್ಭುತ, ಪ್ರಖ್ಯಾತ, ಸರ್ವೋತ್ತಮ ಮತ್ತು ಪೂಜ್ಯತೆಯ ಭಾವನೆಗಳ ಬಿಂದು. ದೇವರೆಂದರೆ ಸಂಪೂರ್ಣ, ಪರಿಪೂರ್ಣ, ಅಖಂಡ, ಅನ್ಯೋನ್ಯ ಕುಂದುಕೊರತೆ ಮತ್ತು ಲೋಪದೋಷ ರಹಿತ, ಪ್ರವೀಣ, ಪಾರಂಗತ ಯಥಾರ್ಥದವನು. ದೇವರ ದರ್ಶನವೆಂದರೆ ದೈವಜ್ಞಾನ, ಸತ್ಯಾನ್ವೇಷಣೆ ಮತ್ತು ದೇವರಂತೆ ಪರಿಪೂರ್ಣತೆ, ಪ್ರವೀಣತೆ, ಪೂರ್ಣ ಏಕಾಸತೆ, ಕೌಶಲ್ಯ, ಅನ್ಯೋನ್ಯತೆಗಳನ್ನು ಕೈಗೂಡಿಸಿಕೊಳ್ಳುವುದು. ದೈವ ಸನ್ನಿಧಿ ಸೇರುವುದು ಅಥವ ಮುಕ್ತಿ ಪಡೆಯುವುದು ಎಂದರೆ ಮೇಲ್ಕಂಡ ಗುಣ ಗಳನ್ನು ರೂಢಿಸಿಕೊಳ್ಳುವುದು. ದೇವರನ್ನು ಸಿದ್ಧಿಸಿಕೋ, ಕೈ-ಗೂಡಿಸಿಕೋ ಎಂದರೆ ನಮ್ಮನ್ನು ನಾವು ಅರ್ಥ ಮಾಡಿಕೊಳ್ಳುವುದು. ನಮ್ಮೊಳಗಿರುವ ಆತ್ಮವನ್ನು ತಿಳಿಯುವುದು. ಆತ್ಮದ ನೆಲೆಯಾದ ಮಾನವ ದೈವಾಂಶ ಸಂಭೂತ ಅಮೃತಸ್ಯ ಪುತ್ರ. ನಿಷ್ಕಳಂಕ ಹೃದ ಯದವರು, ಪವಿತ್ರಾತ್ಮರು ದೇವರನ್ನು ನೋಡುತ್ತಾರೆ (ಮ್ಯಾಥ್ಯೂಸ್) ಶುದ್ಧ ಏಕಾಗ್ರತೆಯ ಮತ್ತು ಸಂಯಮದ ಮನಸ್ಸೇ ದೈವತ್ವ. ದೇವರ ಪೂಜೆಯ ಮೂಲಕ ನಮ್ಮ ಆತ್ಮವನ್ನೇ ನಾವು ಪೂಜಿಸು ತ್ತಿದ್ದೇವೆ. ಇದೇ ದೈವಾರಾಧನೆ. ಪ್ರತೀ ಆತ್ಮವು ನಿಜವಾಗಲೂ ದೈವಾಂಶ. ಅದನ್ನು ಹೊರ ಹೊಮ್ಮಿಸುವುದೇ ಮಾನವ ಜೀವನದ ಗುರಿ. ಒಳಗಿನ ಮತ್ತು ಹೊರಗಿನ ಪ್ರಕೃತಿಯ ಹತೋಟಿಯಿಂದ ಇದು ಸಾಧ್ಯ. ಬಾಹ್ಯ ಪ್ರಕೃತಿ (ಗಾಳಿ, ನೀರು, ಭೂಮಿ) ಗೆಲ್ಲುವುದು ಖಂಡಿತಾ ಒಳ್ಳೆಯದು. ಇದಕ್ಕಿಂತ ಅಂತರ್ ಪ್ರಕೃತಿ ಗೆಲ್ಲುವುದು ಅತ್ಯದ್ಭುತವಾದುದು. ಮಾನವ ತನ್ನ ಮನಸ್ಸಿನ ಆಶ್ಚರ್ಯಕರವಾದ ರಹಸ್ಯಗಳನ್ನು ಅರಿತು, ಅದನ್ನು ನಿಯಂತ್ರಿಸುವುದು ಸರ್ವ ಶ್ರೇಯಸ್ಸು. ನಿನಗೆ ಯಾರು ಸಹಾಯ ಮಾಡಬೇಕು ? ನೀನೇ ವಿಶ್ವದ ಸಹಾಯಕ.

ಎಲ್ಲಿದ್ದಾನೆ, ಮಾನವ, ದೇವರು ಮತ್ತು ಭೂತ, ನಿನಗೆ ಸಹಾಯ ಮಾಡಲು ? ನೀನೇ ವಿಶ್ವದ ದೇವರು. ನೀನು ಎಲ್ಲಿಂದ ಸಹಾಯ ಕೋರುತ್ತಿದ್ದಿ ? ಎಲ್ಲಿಂದಲೂ ಸಹಾಯ ಬಾರದು. ನಿನ್ನಿಂದಲೇ ಅದು ಸಾಧ್ಯ. ನಿನ್ನ ಪ್ರಾರ್ಥನೆಗೆ ಉತ್ತರ ಸಿಕ್ಕಿತು ಎಂಬುದು ನಿನ್ನ ಅಜ್ಞಾನ. ಯಾವುದೋ ಒಂದು ವ್ಯಕ್ತಿ ನಿನಗೆ ಸಹಾಯ ಮಾಡಿದ ಎಂಬ ಭಾವನೆ ನಿನಗೆ ಬಂದಿದೆ. ನಿನಗೆ ಅರಿವಿಲ್ಲದೆ ಪ್ರಾರ್ಥನೆಯ ಫಲ ಕೊಟ್ಟವನು ನೀನೇ. ಸ್ವಾಮೀಜಿಯವರ ಮೇಲ್ಕಂಡ ಹೇಳಿಕೆ ಅದ್ಭುತವಾದುದು.

ತನ್ನಿಂದಲೇ ತನ್ನ ಉದ್ಧಾರವಾಗಬೇಕು. ತನ್ನ ಅಭ್ಯುದಯಕ್ಕೆ ತಾನೇ ಶಿಲ್ಪಿ. (ಗೀತೆ 6-5.) ನನ್ನ ಏಳ್ಗೆಗೆ ನಾನೇ ಶಿಲ್ಪಿ, ಈ ಅಂಶವನ್ನೇ ಸ್ವಾಮೀಜಿ ಒತ್ತಿ ಒತ್ತಿ ಹೇಳಿದ್ದಾರೆ. ನಿರ್ಭಯದವನು ಅದ್ಭುತ ಕಾರ್ಯಗಳನ್ನು ಮಾಡಲು ಸಮರ್ಥ. ಭೀತಿಯೇ ದುಃಖಕ್ಕೆ ಮತ್ತು ದುರವಸ್ಥೆಗೆ ಮೂಲ. ಒಳ್ಳೆಯ ಕಾರ್ಯಗಳನ್ನು ಮಾಡಲು, ನಿರ್ಭೀತ ನಾಗಿ ಮುನ್ನುಗ್ಗಬೇಕು "ಮೇಲೇಳು, ಜಾಗೃತನಾಗು, ಗುರಿಯನ್ನು ಮುಟ್ಟದೇ ನಿಲ್ಲಬೇಡ". ಈ ವಿಶ್ವದಲ್ಲಿ ಸೋಲೆಂಬುದು ಇಲ್ಲವೇ ಇಲ್ಲ. ಸಾವಿರ ಏಟು ತಿಂದರೂ ಜಯ ಕೊನೆಗೆ ಸಿದ್ಧ. ಆದರ್ಶ ದೊಡ್ಡದಾಗಿರ ಬೇಕು. ಆಗ ತಾನೇ ದೇವರೆಂಬ ಭಾವ ಬರುತ್ತದೆ ನಮ್ಮ ಇಚ್ಛಾ ಶಕ್ತಿಗೆ ಏರಿ ಹಾಕಿ, ಕೆರೆ ನಿರ್ಮಿಸಿ, ಒಳ್ಳೆಯ ಕಾರ್ಯಗಳಿಗೆ ಕೋಡಿ ಹರಿಸಬೇಕು.

"ನಿಮ್ಮ ಭವಿಷ್ಯವನ್ನು ನಿರ್ಮಿಸಿಕೊಳ್ಳುವವರು ನೀವೇ. ಎಲ್ಲಾ ಹೊಣೆಯನ್ನು ಹೊರಲು ಸಿದ್ಧರಾಗಿ, ವಿಂಚಿದ ಕಾರ್ಯವನ್ನು ಚಿಂತಿಸಿ, ವ್ಯರ್ಥ ಕಾಲಹರಣ ಬೇಡ. ಅನಂತ ಭವಿಷ್ಯ ನಿಮ್ಮ ಮುಂದೆ ಇದೆ ನಿಮ್ಮ ಪ್ರತಿಯೊಂದು ಮಾತು, ಯೋಚನೆ ಮತ್ತು ಕಾರ್ಯ, ಇವೇ ನಿಮ್ಮ ಭವಿಷ್ಯದ ಬುತ್ತಿ. ಕೆಟ್ಟ ಯೋಚನೆ, ಕೆಟ್ಟ ಕೆಲಸ, ಕ್ರೂರ ಹುಲಿಯಂತೆ ನಿಮ್ಮ ಮೇಲೆ ಎರಗೇ ಎರಗುವುದು. ಒಳ್ಳೆ ಯೋಚನೆ,

ಒಳ್ಳೆ ಕಾರ್ಯಗಳ ಸಾತ್ವಿಕ ಶಕ್ತಿ ನಿಮಗೆ ಸಹಾಯ ಮಾಡುವುದು. ಇದೇ ಪ್ರೇರಕ ಶಕ್ತಿ. ಇದನ್ನು ಪ್ರತಿ ಘಳಿಗೆ ನೆನೆಯಿರಿ.

"ನಮ್ಮ ಏಳಿಗೆಗೆ ಮತ್ತು ನಮ್ಮ ಅವನತಿಗೆ ನಾವೇ ಹೊಣೆಗಾರರು. ನಮಗೆ ನಾವೇ ಮಿತ್ರರು, ನಾವೇ ಶತ್ರುಗಳು, ಯಾರನ್ನೂ ದೂರು-ವಂತಿಲ್ಲ". ಮಾನವನು ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕು (ಗೀತೆ) ನಮ್ಮ ಆದರ್ಶ, ಆಲೋಚನಾ ಮಟ್ಟದಲ್ಲೇ ಅಂತ್ಯವಾಗಿದೆ. ಕಾರ್ಯಗತವಾಗಬೇಕಾದರೆ, ನಮ್ಮ ಮನಸ್ಸನ್ನು ನಮ್ಮ ಬುದ್ಧಿ ಮೂಲಕ ಮೇಲೆತ್ತಬೇಕು. ಆದರ್ಶ ಮತ್ತು ವಾಸ್ತವಗಳ ಕಂದಕವೇ, ನಮ್ಮ ಪತನಕ್ಕೆ ಕಾರಣ ವಿವೇಕ ಮತ್ತು ವಿವೇಚನದ ಬುದ್ಧಿ ಸರ್ವ ಶ್ರೇಯಸ್ಸಿಗೂ ದಾರಿ. ನಮ್ಮನ್ನು ಏಳ್ಗೆಗೆ ಎತ್ತಿಕೊಂಡು ಹೋಗುವ ಸಾಮರ್ಥ್ಯ ನಮ್ಮಲ್ಲೇ ಸುಪ್ತವಾಗಿದೆ ಒಬ್ಬನ ಬುದ್ಧಿಯನ್ನು ಇನ್ನೊಬ್ಬನು ಹತೋಟಿಪಡಿಸಲು ಅಸಾಧ್ಯ. ದೇವರಿಂದಲೂ ಸಾಧ್ಯವಿಲ್ಲ. ಅತ್ಯಧಿಕ ಮಂದಿ ಹಿರಿಯರ, ತಂದೆ-ತಾಯಿಯರ ಪ್ರತಿಸಿತ್ಯದ ಆಶಾ ಭಂಗದ ಅನುಭವ ಇದು. ಸಂಸಾರದ, ಸಮಾಜದ, ರಾಷ್ಟ್ರದ ಮತ್ತು ವಿಶ್ವದ ಇತಿಹಾಸ ತಲೆ ಕೆಳಗಾಗುತ್ತಿರುವುದು ಈ ತತ್ವದ ಅನುಸರಣೆ.

ಒಂದು ಸಾರಿ ಗುಂಪು ಗುಂಪಾಗಿ ದೇವರ ಗುಡಿಗೆ ಹೋಗುತ್ತಿದ್ದವರನ್ನು ನೋಡಿ, ಬ್ರಹ್ಮನನ್ನು ಹುಡುಕಿಕೊಂಡು ಎಲ್ಲಿಗೆ ಹೋಗುತ್ತಿದ್ದೀರಿ. ಭಗವಂತ ಸುತ್ತ-ಮುತ್ತಲಿನ ಜೀವಿಗಳಲ್ಲೇ ಸುಪ್ತನಾಗಿದ್ದಾನೆ. ಭೂಲೋಕದ ಮನುಷ್ಯ,ದೇವರ ಅತಿ ಅದ್ಭುತ ಸಂಕೇತ. ಅವನ ಪೂಜೆಯೇ ಫಲಕಾರಿ. ಮಾನವ ಸೇವೆಯೇ ಮಹಾಪೂಜೆ. ಯಾವ ಜನಾಂಗದಲ್ಲಿ ನರನನ್ನು ನಾರಾಯಣನೆಂದು ಪೂಜಿಸುತ್ತಾರೋ ಅವರೇ ಪುಣ್ಯವಂತರು ಸೊಕ್ಕನ್ನು ಸೊರಗಿಸಿ ಹಳ್ಳಿಗರ, ಅಂತ್ಯಜರ, ದಲಿತರ, ಸಖ್ಯ ಮತ್ತು ವಿಶ್ವಾಸ ಗಳಿಸಿದವನೇ ಕೃತಕೃತ್ಯ. ದೇವರನ್ನು ದೇವ ಮಾನವನೆಂದು ಪೂಜಿಸಬೇಕು. ಕ್ರಿಶ್ಚಿಯನ್ನರಲ್ಲಿ ಅಂತಹ ದೇವ ಮಾನವನಿದ್ದ. ಅವನೇ ಏಸುಕ್ರಿಸ್ತ. ರಾಮ, ಕೃಷ್ಣ, ಬುದ್ಧ ಇವರೆಲ್ಲಾ ವಿಶ್ವ ಏಕತಾತ್ಮತೆಯ

ಮಹಾತ್ಮರು. ಅಂತಹವರು ನೂರಾರು ಜನ. ಅವರ ರೂಪದಲ್ಲಿರುವ ಮನುಷ್ಯರನ್ನು ನಾವು ಪೂಜಿಸೋಣ.

"ಸದ್ಗುಣಗಳು ಅಸ್ತಂಗತವಾಗಿ, ಅನೀತಿ ತಾಂಡವವಾಡಿದಾಗ ನಾನೇ ಮನುಕುಲದ ಉದ್ಧಾರಕ್ಕಾಗಿ ಹುಟ್ಟಿಬರುತ್ತೇನೆ" ಎನ್ನುತ್ತಾನೆ ಶ್ರೀ ಕೃಷ್ಣ. ದೇವರ ಇಂತಹ ಅವತಾರಗಳನ್ನು ಪೂಜಿಸಬೇಕು. ಕ್ರಮೇಣ ನಮ್ಮ ಜೀವನಕ್ರಮವೇ ಬದಲಾಗಿ ಅವರಂತೆ ಆಗುತ್ತೇವೆ. ಆದರೆ ಕ್ರಿಸ್ತನನ್ನು, ಬುದ್ಧನನ್ನು ಒಂದುಗೂಡಿಸಬೇಕು. ಕ್ರಿಸ್ತ ಬದುಕಿದ್ದ ದೇವರು. ಪ್ರೀತಿಯೇ ವ್ಯಕ್ತಿತ್ವ ಬಂದ ರೂಪ. ಅವನು ಉಪದೇಶಿಸಿದ ಸತ್ಯ, ವೇದ, ಅಮರ. ಅವನು ಪರಿಶುದ್ಧ ವ್ಯಕ್ತಿ.

ಆದಿಯ ನಮ್ಮ ಪೂರ್ವಜರು ಅವ್ಯಕ್ತ ಮತ್ತು ಅಗೋಚರ ಭಾವನೆಗಳನ್ನು ಅರ್ಥಮಾಡಿಕೊಳ್ಳಲು ಅಶಕ್ತರಾಗಿ ನಿರ್ದಿಷ್ಟ ವೈದೀಕ ಕರ್ಮಗಳ ಅನುಷ್ಠಾನದ ಮೂಲಕ ದೈವಕಲ್ಪನೆಯನ್ನು ಅಥೈಸಲು ಪ್ರಯತ್ನ ಪಟ್ಟರು. ಅದರ ಫಲವಾಗಿ ಮೂರ್ತಿ ಪೂಜೆ ಮತ್ತು ಸಂಕೇತಗಳು ಉದ್ಭವವಾದವು. ಆಕಾರ, ರೂಪ, ಗಂಟೆ, ದೀಪ, ಮೊಂಬತ್ತಿ, ಹೂವು ನೀರು, ಪುಸ್ತಕ, ಚರ್ಚು, ದೇವಾಲಯ, ಮಸೀದಿ ಮುಂತಾದ ದೈವ ಪ್ರೇರಕ ಸಂಕೇತಗಳು ಮಾನವ ವಿಕಾಸಕ್ಕೆ ಅವಶ್ಯಕವಾದವು. ಆ ಜಡವಸ್ತುಗಳಿಂದ ದೇವರ ಪರಿಪೂರ್ಣ ಪರಿಜ್ಞಾನ ಪಡೆಯುವ ಪ್ರಯತ್ನ ಫಲಿಸಲಿಲ್ಲ, ಸತ್ಯದರ್ಶನದ ಎತ್ತರಕ್ಕೆ ಏರಲು ಅಡ್ಡಿಪಡಿಸುವ ಆತಂಕಗಳಾದವು.

ಎಲ್ಲಾ ಧರ್ಮ ಸುಧಾರಕರೂ ಸಂಕೇತಗಳ ಮತ್ತು ಪ್ರಕ್ರಿಯೆಗಳ ವಿರುದ್ಧ ಆಕ್ಷೇಪಣೆಗಳನ್ನು ಎತ್ತಿದ್ದಾರೆ ಆದರೆ ಅವರ ಪ್ರಯತ್ನಗಳೆಲ್ಲಾ ಗಾಳಿಯನ್ನು ಗುದ್ದಿದಂತೆ ನಿಷ್ಪ್ರಯೋಜಕವಾಗಿವೆ. ಯಾವುದನ್ನೂ ನಿಲ್ಲಿಸಲಾಗಿಲ್ಲ. ಈ ವ್ಯವಸ್ಥೆಗೆ ವಿರೋಧಿಗಳಾದ ಮಹಮ್ಮದೀಯರೂ ಕೂಡ ಕಬ್ಬಾದಲಯಕ್ಕೆ ಹೋಗುತ್ತಾರೆ. ಅಲ್ಲಿನ ಕರಿಕಲ್ಲಿಗೆ ಮುತ್ತಿಟ್ಟು ಬರುತ್ತಾರೆ. ಜಮ್ ಜಮ್ ಎಂಬ ಊರಿನಲ್ಲಿರುವ ಬಾವಿಯಲ್ಲಿ ಸ್ನಾನ

ಮಾಡಿದರೆ ಎಲ್ಲಾ ಪಾಪಗಳೂ ಪರಿಹಾರವಾಗುತ್ತವೆ ಎಂಬುದು ಮಹ ಮ್ಮದೀಯರ ನಂಬಿಕೆ. ಕ್ರಿಸ್ತರಿಗೆ ಬೇರೆ ಎಲ್ಲಾ ಶ್ರೇಷ್ಠ ಜಾಗ ಗಳಿಗಿಂತಲೂ ಚರ್ಚ್ ಪವಿತ್ರವಾದ ಪ್ರದೇಶ. ಪ್ರಾಟೆಸ್ಟಂಟರಿಗೆ ಶಿಲುಬೆ, ಕ್ಯಾತೋಲಿಕರಿಗೆ ಪ್ರತಿಮೆಗಳು ಪವಿತ್ರ.

ವಿಶ್ವದಾದ್ಯಂತ ಕೆಳಸ್ತರದಲ್ಲಿರುವ ಮಾನವರಿಗೆ ಇಂತಹ ಸಂಕೇತಗಳು ಅವಶ್ಯಕ. ಮಾನವನ ಗುರಿ ಅಲೌಕೀಕತೆ, ಆತ್ಮ ಸಾಕ್ಷಾತ್ಕಾರವೇ ಹೊರತು ವಿಷಯಾಸಕ್ತಿಯಲ್ಲ. ವಿವೇಕಾನಂದರು ಮುಂದೆ ಹೇಳಿದರು ಕೇವಲ ಎರಡು ರೀತಿಯ ಜನರಿಗೆ ಪೂಜೆ ಮಾಡಲು ಒಂದು ಮೂರ್ತಿಯ ಸಹಾಯ ಬೇಕಿಲ್ಲ. ಒಂದು ಮಾನವ ಮೃಗ. ಇನ್ನೊಂದು ಸ್ವಯಂ ಪರಿಪೂರ್ಣ ಮಾನವ.

## ಕುವೆಂಪು

"ರೂಪ ವಿವರ್ಜಿತವಾದ ನಿನಗೆ, ಧ್ಯಾನ ಸಮಯದಲ್ಲಿ ರೂಪ ಕಲ್ಪನೆ ಮಾಡಿದ್ದೇನೆ. ನಿನ್ನನ್ನು ಸ್ತೋತ್ರ ಮಾಡಿ ನಿನ್ನ ಅನಿರ್ವಚನೀಯತೆ ಯನ್ನೂ ದೂರೀಕರಿಸಿದ್ದೇನೆ. ತೀರ್ಥ ಯಾತ್ರಾದಿಗಳನ್ನು ಕೈಗೊಂಡು ನಿನ್ನ ವ್ಯಾಪಿತತ್ವವನ್ನು ನಿರಾಕರಿಸಿದ್ದೇನೆ. ಹೇ ಜಗದೀಶ, ಬುದ್ಧಿ ವಿಕಲತೆಯಿಂದ ನಾನು ಮಾಡಿರುವ ಈ ಮೂರು ಅಪರಾಧಗಳು ಕ್ಷಮಾರ್ಹ ಸ್ವಾಮಿ."

"ಪುಣ್ಯಕ್ಷೇತ್ರಗಳಿಗೆ ಯಾತ್ರೆ ಹೋಗಿಬಂದ ಮಾತ್ರದಿಂದಲೇ ಪವಿತ್ರನಾಗಿ ಬಿಡುತ್ತೇನೆ ಎಂಬ ನಂಬಿಕೆಯಲ್ಲಿ, ಆತ್ಮ ವಂಚನೆಗೆ ವಿಶೇಷವಾದ ಅವ ಕಾಶವಿರುವುದನ್ನರಿತೆ, ಅನೇಕ ಕವಿಗಳು, ಸಾಧು–ಸಂತರು, ಅದರಿಂದೊ ದಗುವ ಧಾರ್ಮಿಕ ಸಹಾಯವನ್ನು ಪ್ರಶಂಸಿಸುವುದಕ್ಕಿಂತಲೂ, ಹೆಚ್ಚಾಗಿ ಅದರಿಂದೊದಗಬಹುದಾದ ಧಾರ್ಮಿಕ ಅಪಾಯದ ಕಡೆಗೆ ನಮ್ಮ ಗಮನ ಸೆಳೆದಿದ್ದಾರೆ."

"ಸ್ವಾಮಿ ಸೋಮನಾಥನಂದರು ತಮ್ಮ ಪ್ರವಾಸ ಪುಸ್ತಕಕ್ಕೆ (ಹೈಮಾ

ಚಲ ಸಾನ್ನಿಧ್ಯದಲ್ಲಿ) ಮುನ್ನುಡಿ ಬರೆದುಕೊಡಬೇಕೆಂದು ಕೇಳಿದಾಗ ನಾನು ಮೊದಲು ಹಿಂಜರಿದೆ. ಏಕೆಂದರೆ ನನಗೆ ಪುಣ್ಯಕ್ಷೇತ್ರ ಮತ್ತು ತೀರ್ಥಯಾತ್ರೆಗಳ ವಿಚಾರದಲ್ಲಿ ಅಷ್ಟೇನು ಶ್ರದ್ಧೆಯಿದೆಯೆಂದು ಹೇಳಿ ಕೊಳ್ಳಲಾರೆ, ನಾನು ಪೂಜೆಯ ಸಲುವಾಗಿ ದೇವಸ್ಥಾನಗಳಿಗೆ ಕೂಡಾ ಹೋಗದೆ, ಕಾಲು ಶತಮಾನಕ್ಕಿಂತಲೂ ಹೆಚ್ಚಾಯಿತೆಂದು ತೋರುತ್ತದೆ. ನಾನು ಜಾತಕ, ಪಂಚಾಂಗ ಇತ್ಯಾದಿಗಳ ಕಡೆ ಎಂದೂ ಮುಖ ಹಾಕಿ ದವನಲ್ಲ. ನನಗೆ ರಾಹುಕಾಲ, ಗುಳಿಕಕಾಲಗಳ ಅರ್ಥವೂ ಗೊತ್ತಿಲ್ಲ. ಪಿತೃಗಳಿಗೆ ಶ್ರಾದ್ಧ ಮಾಡುವುದು, ಪಿಂಡ ಅರ್ಪಿಸುವುದು, ಇತ್ಯಾದಿ-ಗಳನ್ನು ಕೇಳಬಲ್ಲನೆ ಹೊರತು, ಮಾಡುವ ಗೋಜಿಗೆ ಹೋದವನಲ್ಲ." –ಕುವೆಂಪು. ದೇವಸ್ಥಾನಕ್ಕೆ ಹೋಗುವುದು; ಪೂಜೆ ಮಾಡುವುದು ಬೇಕು. ಅದು ಶಿಶುವಿಹಾರವಿದ್ದಂತೆ. ಸ್ವಾರ್ಥರಹಿತವಾದ ಪೂಜೆ ಫಲದಾಯಕ. ಕವಿಸಾರ್ವಭೌಮ ಕುವೆಂಪುರವರ ಈ ಕೆಳಕಂಡ ಪದ್ಯ ದಲ್ಲಿ ಅರ್ಥಗರ್ಭಿತವಾದ ದೇವರ ವಿವರಣೆಯನ್ನು ಕಾಣಬಹುದು.

ಮಣಿಯಲೆನ್ನ ಶಿರವು ನಿನ್ನ ಚರಣಧೂಳಿತಲದಲ್ಲಿ ॥
ನನ್ನ ಅಹಂಕಾರವೆಲ್ಲ ಮುಳುಗಲಶ್ರುಜಲದಲಿ ॥
ನನಗೆ ನಾನೇ ಪೂಜೆಗೈಯ ಸೊಡರನೆತ್ತಲು ॥
ಬೆಳಕು ಬರುವ ಬದಲು ಅಯ್ಯೋ ಬಂಯು ಕತ್ತಲು ॥
ಅಹಂಕಾರದಂಧಕಾರ ಮುತ್ತುತಿದೆ ಸುತ್ತಲೂ ॥
ನನ್ನ ನಾನೇ ಮರೆಯುದಂತೆ ನಾನು ಗೈವ ಕರ್ಮದಿ ॥
ನಿನ್ನ ಇಚ್ಛೆ ಪೂರ್ಣವಾಗಲೆನ್ನ ಜೀವ ಧರ್ಮದಿ ॥
ತಿಳಿಯಲೆನ್ನ ಜ್ಞಾನ ನಿನ್ನ ಚರಮಶಾಂತಿಯ ॥
ಬೆಳಗಲೆನ್ನ ಪ್ರಾಣ ಪರಮಕಾಂತಿಯ ॥
ನನ್ನನೆಳಸು ನೀನೇ ನೆಲಸು ಹೃದಯ ಪದ್ಮತಲದಲೀ ॥

ನಾನು ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ, ಎಂಬ ಶುದ್ಧ ಭಾವನೆ ಬಂದಾಗ ಅಹಂಕಾರ ಸಂಪೂರ್ಣವಾಗಿ ನಾಶವಾದ ಹಾಗೆ. ಮಾಡುವ

ಕೆಲಸಗಳಲ್ಲಿ ಅಹಂಕಾರ ಇಲ್ಲವಾದಾಗ ಪಾಪವೇ ಇಲ್ಲ. ನಿರಾಂಹಕಾರಿ ದೈವಾಂಶ ಆ ಸ್ಥಿತಿಯೇ ದೈವಸಿದ್ಧಿ. ತಾಯಿ ಸ್ತನ ಸೇದುವ ಶಿಶು ನಿರಾಂಹಕಾರದ, ನಿಗರ್ವದ, ನಿಗರನಿಗಮ. ಅಹಂಕಾರ ವರ್ಜನೆಯಿಂದ ಮಾನವ ಸರ್ವರ ಪ್ರೀತಿಗೆ ಪಾತ್ರ. ಯಕ್ಷನ ಪ್ರಶ್ನೆಗೆ ಇದೇ ಯುಧಿಷ್ಠರನ ಉತ್ತರ. ಇಂತಹವರನ್ನೇ ದೇವರೆನ್ನುವುದು.

## ರವೀಂದ್ರನಾಥ ಠಾಗೂರ್

ದೇವರು ಕತ್ತಲೆ ಕೋಣೆಯೊಳಗಿಲ್ಲ. ಗುಡಿ, ಮಸೀದಿ, ಚರ್ಚುಗಳಲ್ಲಿಲ್ಲ. ಫಲಾಪೇಕ್ಷೆಯಿಲ್ಲದೆ ಹಗಲಿರುಳು, ಬಿಸಿಲು, ಛಳಿ ಎನ್ನದೆ ಬೆವರಿಳಿಸಿ ಉಳುವ ನೇಗಿಲಯೋಗಿಯಲ್ಲಿ, ರಸ್ತೆ ನಿರ್ಮಾಣಕ್ಕೋಸ್ಕರ ನಿಷ್ಠೆಯಿಂದ ಕಲ್ಲು ಚಚ್ಚುವವನಲ್ಲಿ ಇದ್ದಾನೆ, ದೇವರು ಎಂದು ಮೊಳಗಿದರು. ಲೋಕ ಕಣ್ಣೀರು ಹೊಳೆ ಹರಿಸುತ್ತಿರುವಾಗ, ನಾನು ನನ್ನೊಬ್ಬನ ಮುಕ್ತಿಗೆ ಮುಲುಕಲೆ ?

## ದೈವತ್ವ – ಅರವಿಂದರು

ಅರವಿಂದರ ಅನಿಸಿಕೆ – ಧರ್ಮವೇ ದೇವರು. ಧರ್ಮದಿಂದ ಭಾರತ ಬದುಕಿದೆ. ಅವರು ನಿತ್ಯ ನಡುವಳಿಕೆಗೆ, ಆಧ್ಯಾತ್ಮಿಕ ಶಕ್ತಿಯನ್ನು ಹೊಂದಿಸಿದ್ದರು, ಏಕಾಗ್ರತೆಯ ಕಾರ್ಯಗತಿಯಲ್ಲಿ ಅವರಿಗೆ ಸಂಪೂರ್ಣ ಭರವಸೆ. ಅದು ಮಾನವನ ಹಂತದಲ್ಲಿ ನಿಲ್ಲದು. ಮಾನವನು ದೈವತ್ವವನ್ನು ಮುಟ್ಟಲೇಬೇಕೆಂಬುದೇ ಅವರ ಗಾಢನಂಬಿಕೆ.

## ರಮಣ ಮಹಾಋಷಿಗಳು

ಒಬ್ಬ ಭಕ್ತ - ರಮಣ ಮಹಾಋಷಿಗಳನ್ನು ದೇವರು ಎಲ್ಲಿದ್ದಾನೆ ತಿಳಿಸಿ ಎಂದು ಬೇಡಿಕೊಂಡ. "ಅವನು ಎಲ್ಲಿದ್ದಾನೆ ತಿಳಿಸಿ".

ಅನುಕಂಪದಿ ಅಪ್ಪಣೆಗೈದರ್ —

ನಿರಂತರದೀ ನೀ ಹುಡುಕುತ್ತಿರುವವನು ಹಿಮವತ್ ಪರ್ವತ ಶಿಖರದಲ್ಲಿಲ್ಲ
ಗಾಢ ಅಭೇದ್ಯ ಘೋರ ಅರಣ್ಯದಲ್ಲೂ ಇಲ್ಲ,
ಪುಣ್ಯಕ್ಷೇತ್ರ, ತೀರ್ಥಯಾತ್ರೆ ಅನಗತ್ಯ,
ಜಪಮಣಿಯ ಲಕ್ಷ-ಲಕ್ಷ ಎಣಿಕೆ ವ್ಯರ್ಥ,
ಅವನ ಅಭಿದಾನ ಬೊಬ್ಬೆ ಬೇಡ,
ಯಥಾರ್ಥವಲ್ಲದ ಭಜನೆಯೂ ಬೇಡ,
ಅಲೆದಾಟವನ್ನೆಲ್ಲಾ ನಿಲ್ಲಿಸಿ,
ಜಪಮಣಿಗಳ ಚೆಲ್ಲು,
ಗ್ರಂಥಗಳನ್ನು ರಭಸದಿಂದ ಹರಿವ ಆಳದ ನೀರಿಗೆ ಎಸೆ,
ಅನ್ಯಥಾ ದಾನ ಧರ್ಮಗಳನ್ನು ನಿಲ್ಲಿಸು.
ಅವನ ಅನ್ವೇಷಣೆಯಲ್ಲಿ ಇವೆಲ್ಲಾ ವಿಫಲ,
ಅಂತಃಶುದ್ಧಿಗೈ,
ಉಜ್ವಲ ಜ್ಞಾನ ಜ್ಯೋತಿಯನ್ನರಸಿ,
ನಿನ್ನ ಸೊಕ್ಕನ್ನು ಅದರೊಳಗೆ ಸುರಿದು ಸುಟ್ಟು,
ಅಂತ್ಯ ಸಂಸ್ಕಾರಗೈ,
ನಿನ್ನಂತರಂಗದ ಕನ್ನಡಿಯ ನಯಮಾಡಿ,
ದೈವಕ್ಕಧೀನನಾಗು.

## ಪಂಡಿತ್ ಜವಹರ್‌ಲಾಲ್ ನೆಹರುರವರು

ನಾಸ್ತಿಕ ಜವಾಹರಲಾಲರು ತಮ್ಮನ್ನು ತಾವೇ ಈ ರೀತಿ ಪಶ್ನಿಸಿಕೊಳ್ಳು ತ್ತಾರೆ. ದೈವಶ್ರದ್ಧೆಯಿಂದ ಅಸಂಖ್ಯ ನೊಂದ ಆತ್ಮಗಳಿಗೆ ಸುಖ, ನೆಮ್ಮದಿ ಮತ್ತು ಶಾಂತಿ ಹೇಗೆ ದೊರೆಯುತ್ತಿದೆ ? ಎಂದು. ಇದಕ್ಕೆ ಉತ್ತರ ಹುಡುಕಲು ಗೀತೆ, ಬೈಬಲ್ಲು, ಕುರಾನ್ ಮುಂತಾದ ವಿಶ್ವಮತ ಗ್ರಂಥಗಳ ಮೊರೆಹೋದರು. ಸ್ವಾತಂತ್ರ್ಯ ಸಮರಕ್ಕೆ ಎದೆಕೊಟ್ಟು,

ಭುಜತಟ್ಟಿ ನಿಲ್ಲುತ್ತಿದ್ದ ಸಾಮಾನ್ಯರ ಭಾವನೆಗಳನ್ನು ಅರ್ಥ ಮಾಡಿಕೊಂಡು ಅವರಲ್ಲಿ ತಾವೊಬ್ಬರಾದರು.

"ತನ್ನನ್ನು ತಾನು ಗೆದ್ದಿರುವ ಮಾನವನನ್ನು ಸೋಲಿಸಲು ದೇವರಿಂದಲೂ ಅಸಾಧ್ಯ" ಎಂಬ ಬುದ್ಧನ ವಿವೇಕವಾಣಿ, ನೆಹರೂರವರಿಗೆ ಬಹು ಪ್ರಿಯ ವಾಗಿತ್ತು. ವೈಜ್ಞಾನಿಕ ದೃಷ್ಟಿಯ ಜವಾಹರರು ಜನಸಾಮಾನ್ಯರಲ್ಲಿ ಮಾನವ ಪ್ರಗತಿಗೆ, ದೈವಶ್ರದ್ಧೆ ಅತ್ಯಾವಶ್ಯಕ ಎಂಬ ಅಂಶ ಭದ್ರವಾಗಿ ಬೇರು ಬಿಟ್ಟಿರುವುದನ್ನು ಅರ್ಥಮಾಡಿಕೊಂಡು,ಅದನ್ನು ಅಲುಗಾಡಿಸುವ ಯತ್ನ ಮಾಡಲಿಲ್ಲ

## ಡಿ. ವಿ. ಗುಂಡಪ್ಪನವರು (ಡಿ.ವಿ.ಜಿ.)

ಸಮ್ಯಗ್ಜೀವನವೇ ಭಗವದಾರಾಧನೆ ಜೀವನದ ಸಮ್ಯಗ್ಜೀವನವೇ ಧರ್ಮ. ಧರ್ಮದ ಪರಿಪೂರ್ಣ ಫಲವೇ ಮೋಕ್ಷ. ಹೀಗೆ ಯಾವುದು ಪೂರ್ವಿಕರಿಗೆ ಮೋಕ್ಷ ಶಾಸ್ತ್ರವೋ, ಅದು ಇಂದಿನವರಿಗೆ ಜೀವನ ಧರ್ಮಶಾಸ್ತ್ರ.

## ಸಾಧುವಾಸವಾಣಿಯವರು

ಪ್ರತಿ ರೋಗಿ ಭಗವಂತನ ಪಠ. ಅವರ ಸೇವೆ ದೇವರ ಆರಾಧನೆ ದೇವ ರನ್ನು ಆರಾಧಿಸಿ, ಅವನ ಸೃಷ್ಟಿಯಾದ ಮಾನವನನ್ನು ಸೇವಿಸದಿದ್ದರೆ, ಅಂಥ ಮತ ಹುಲ್ಲುಕಡ್ಡಿಗೆ ಸಮಾನ.

ಭಾರತದ ಹೃದಯ ಹಳ್ಳಿಗಳಲ್ಲಿ ಮಿಡಿಯುತ್ತಿದೆ. ಭಗವಂತನ ಪ್ರತಿಮೆ ಯನ್ನು ಕಾಡಿನಲ್ಲಿ ಹಾರಾಡುವ ಹಕ್ಕಿಗಳಲ್ಲಿ, ನೆಗೆದಾಡುವ ಪ್ರಾಣಿಗಳಲ್ಲಿ ಕಾಣುತ್ತೇನೆ. ಅವುಗಳನ್ನು ಪ್ರೀತಿಸದಿದ್ದರೆ ದೇವರನ್ನು ಅಗೌರವಿಸಿ- ದಂತೆ ಎಂಬುದು ನನ್ನ ಭಾವನೆ. ನಾವು ಹೊಂದಿರುವ ಪ್ರತಿಯೊಂದೂ ನಮ್ಮ ಕಾಲ, ಕುಶಲತೆ, ನಮ್ಮ ಚೈತನ್ಯ, ನಮ್ಮ ಅನುಭವ, ನಮ್ಮ ಸಿರಿ ಸಂಪತ್ತು, ನಮ್ಮ ಬುದ್ಧಿವಂತಿಕೆ, ನಮ್ಮ ಜ್ಞಾನ, ನಮ್ಮ ಪ್ರಭಾವ ಗಳೆಲ್ಲ ನಮಗೆ ಎರವಾಗಿ ದೊರಕಿರುವುದು. ಇವುಗಳ ಅವಶ್ಯಕತೆ

ಯಾರಿಗೆ ಹೆಚ್ಚಾಗಿದೆಯೋ, ಅವರ ಸೇವೆಗಾಗಿ ಸಲ್ಲಬೇಕೇ ವಿನಹ ಅಧಿಕಾರ ಹೊಂದುವುದಕ್ಕಾಗಲೀ ಅಥವಾ ವ್ಯಕ್ತಿ ಗೌರವಕ್ಕಾಗಲೀ ಖಂಡಿತಾ ಅಲ್ಲ. ಆ ಪ್ರಸಾದಗಳೆಲ್ಲಾ ಭಗವಂತನ ಉಪಕರಣಗಳಾಗಿ, ಸಹ ಯಾತ್ರಿಕರ ಕರಡು ದಾರಿಯ ಜೀವನದ ಭಾರ ಇಳಿಸಲು, ಸಹಾಯವಾಗಬೇಕು.

ಸಾಧು ಅವರು ಮುಂದೆ ಹೇಳಿದರು — ಕಣ್ಣಿಗೆ ಕಾಣುತ್ತಿರುವ ಸೋದರರನ್ನು ಪ್ರೀತಿಸದೆ, ಕಾಣಿಸದೆ ಇರುವ ದೇವರನ್ನು ಹೇಗೆ ಪ್ರೀತಿಸಲು ಸಾಧ್ಯ?

## ಪದ್ಮಭೂಷಣ ಡಾ|| ಮೋದಿಯವರು

ವೈದ್ಯ ಪದವಿ ಪಡೆದ ತರುಣದಲ್ಲೇ, ಮಹಾತ್ಮಗಾಂಧಿಯವರ ಪ್ರಭಾವಕ್ಕೆ ಬಿದ್ದು, ತಮ್ಮ ದೇಶದ ನೇತ್ರ ರೋಗಿಗಳ ಸೇವೆಗೆ, ತಮ್ಮನ್ನು ಮುಡುಪಿಡಲು ಪಣತೊಟ್ಟರು. ಇದೂವರೆಗೂ ಐವತ್ತು ಲಕ್ಷ ರೋಗಿಗಳ ತಪಾಸಣೆ ನಡೆಸಿ ಸಂಪೂರ್ಣ ರುಸಂರಹಿತವಾಗಿ ಐದು ಲಕ್ಷ ನೇತ್ರ ಶಸ್ತ್ರ ಚಿಕಿತ್ಸೆ ನಡೆಸಿದ್ದಾರೆ, ಎಂಬ ಅಂಶ ನಂಬಲಸಾಧ್ಯ ಎಂದು ಕಂಡರೂ ಸತ್ಯ. ಇವರ ದಕ್ಷತೆ ಆಶ್ಚರ್ಯಕರವಾದುದು. ಒಂದೇ ದಿನದಲ್ಲಿ ಎಂಟುನೂರಾ ಮೂವತ್ತೊಂದು (೮೩೧) ನೇತ್ರ ಚಿಕಿತ್ಸೆ ನಡೆಸಿರುವ, ಕರಕೌಶಲ್ಯ ಗಿನ್ನೆಸ್ ಪುಸ್ತಕದಲ್ಲಿ ದಾಖಲಾಗಿರುವುದು, ಆನಂದ ದಾಯಕ. ಜೀವನದ ಪರಮ ಧ್ಯೇಯಗಳಾದ ತ್ಯಾಗ, ಸೇವೆ, ಕರುಣೆಗಳ ಮೂರ್ತೀಕೃತ ವ್ಯಕ್ತಿ, ಡಾ|| ಮೋದಿಯವರು, ತಮ್ಮ ಸೌಭಾಗ್ಯಗಳನ್ನೆಲ್ಲಾ, ಹೆಚ್ಚು ಅವಶ್ಯಕತೆ ಇರುವವರಿಗೆ ಸಮರ್ಪಣಾಭಾವದಿಂದ ಧಾರೆ ಎರೆಯುತ್ತಾ ಬರುತ್ತಿದ್ದಾರೆ.

"ನನ್ನ ರೋಗಿಗಳು ನನ್ನ ದೇವರು
ಶಸ್ತ್ರ ಚಿಕಿತ್ಸಾ ಕೊಠಡಿಯೇ ನನ್ನ ಗುಡಿ
ನನ್ನ ಶಸ್ತ್ರ ಚಿಕಿತ್ಸಾ ಸಲಕರಣೆಗಳು ಪವಿತ್ರ ಘಂಟೆಗಳು"

ಇದಕ್ಕಿಂತ ಮಿಗಿಲಾದ ದೇವರ ಕಲ್ಪನೆ ಮೂರು ಲೋಕ ಹುಡುಕಿದರೂ ಸಿಕ್ಕದು.

# ಕನಕಪುರದ ಕರ್ಮಯೋಗಿ ಕರಿಯಪ್ಪನವರು

ಗಾಂಧೀಜಿಯವರಿಂದ ಪ್ರಭಾವಿಸಲ್ಪಟ್ಟು, ನೌಕರಿಯ ಮೋಜಿನ ಮೋಹಕ್ಕೆ ಮಾರುಹೋಗದೆ, ತ್ಯಾಗ ಸೇವೆಯ ಮುಳ್ಳು ಹಾದಿಯನ್ನು ಆರಿಸಿ, ಮಹಾತ್ಮರಾದವರ, ದೇವರ ಕಲ್ಪನೆ ಬಹು ಫಲಕಾರಿ. ಹಳ್ಳಿಯವರ ತೆರಿಗೆ ಹಣದಿಂದ ಪದವಿ ಪಡೆದ ತಾನು ಋಣ ಹರಿಸಿ ಕೃತಕೃತ್ಯನಾಗಿದಿದ್ದರೆ, ಸಮಾಜ ಘಾತುಕನಾಗುತ್ತೇನೆ ಎಂಬ ಉಚ್ಛ ಧ್ಯೇಯ ಹರೆಯ ಕರಿಯಪ್ಪನನ್ನು ಕೊರೆಯಿತು. ಹಳ್ಳಿಯವರ ಅಸಾನುಕೂಲ, ಅವಿದ್ಯೆ, ಅಜ್ಞಾನ, ಅತೀವ ಅಭಾವ, ದುಷ್ಕರ ಪರಿಸ್ಥಿತಿ ಅಲ್ಲದೆ ಪ್ರತಿಯೊಬ್ಬರ ಶೋಷಣೆಗೂ ಸುಲಭವಾಗಿ ಬಲಿಯಾಗುತ್ತಿದ್ದ ಸತ್ಯಾಂಶ, ಕರಿಯಪ್ಪನವರಂಥ ಕರುಣಾಳುಗಳಿಗೆ ಮಾತ್ರ ಹಿಂಸಾದಾಯಕವಾಗಿತ್ತು.

ಸುಮಾರು 1930ರ ವೇಳೆಗೆ, ಸರ್ವಸುಖಗಳನ್ನು ವರ್ಜಿಸಿ ಭೀಷ್ಮ ಪ್ರತಿಜ್ಞೆ ಕೈಗೊಂಡು ಬಡಮಕ್ಕಳ ಪೋಷಣೆ ಮತ್ತು ವಿದ್ಯಾಭ್ಯಾಸದ ಜವಾಬ್ದಾರಿಯನ್ನು ಸ್ವಪ್ರೇರಣೆಯಿಂದ ಹೊತ್ತುಕೊಂಡರು. ಅನೇಕ ಬಾರಿ ರಾಷ್ಟ್ರವಿಮುಕ್ತಿಗೆ ಕಾರಾಗೃಹವಾಸ ಅನುಭವಿಸಿದರು. ಅನೇಕ ಅವಧಿಗೆ ವಿಧಾನಸಭಾ ಸದಸ್ಯರಾದರು. ಒತ್ತಾಯ ಬಂದರೂ ಮಂತ್ರಿ ಪದವಿಯನ್ನು ವತ್ತರಿಸಿದರು. ನೊಂದವರ ಕಣ್ಣೀರೊರೆಸಿ, ಬಡ ಮಕ್ಕಳ ಶುಶ್ರೂಷೆ, ವ್ಯವಸಾಯದ ಕಾಯಕ, ಉಪಾಧ್ಯಾಯ ವೃತ್ತಿಯಲ್ಲೇ, ಆನಂದ ಕಂಡರು.

1979ರಲ್ಲಿ ಮರಣ ಹೊಂದಿದರು. ಮೂರು ಮಕ್ಕಳಿಂದ ಪ್ರಾರಂಭವಾದ ಮೊಟ್ಟೆ ಜೋಪಡಿ, ದಯಾನಂದ ವಸತಿ ವಿದ್ಯಾನಿಲಯ, ನಾಲ್ಕು ಹೈಸ್ಕೂಲುಗಳು, ಒಂದು ಕಾಲೇಜು ಮುಂತಾದ ಭವ್ಯ ಸಂಸ್ಥೆಗಳು ನಾಲ್ಕು ಸಾವಿರ ಕೂಸು, ಬಾಲಕ, ಬಾಲಕಿಯರು, ಯುವಕರು, ಯುವತಿಯರುಗಳಿಂದ ತುಂಬಿ ತುಳುಕುತ್ತಿದೆ. ಅಲ್ಲದೆ ಗಾಂಧೀಫಾರಂ, ಸಿನಿಮ ಮಂದಿರ,ಅಂಗಡಿಗಳ ಸಾಲು ಮುಂತಾದ ಕೋಟ್ಯಾಂತರ ರೂಪಾಯಿಗಳ ಆಸ್ತಿ ಸಾರ್ವಜನಿಕ ಸ್ವತ್ತಾಗಿದೆ.

ಇಂಥ ನಿಸ್ವಾರ್ಥ,ಸೇವಾ ತ್ಯಾಗದ ಸಾಧನೆ ಕೈಗೂಡಿಸಿಕೊಂಡ ಅದಮ್ಯ, ನಿರ್ಭೀತ, ಪ್ರಾಮಾಣಿಕ, ಸರಳ ಅನಭಿಷಕ್ತ ಮತ್ತು ಅಸಾದೃಶ ಸಂನ್ಯಾಸಿಯು ದೇವರ ಕಲ್ಪನೆ ಏನು?

ಪಠಗಳಿಟ್ಟು ಪೂಜಿಸಿದವರಲ್ಲ. ಗುಡಿಗೆ ಹೋದವರಲ್ಲ. ವಿಡಂಬನಾನು ಕರಣೆ ಅವರಿಗೆ ಬೇಡವಾಗಿತ್ತು.ಆದರೂ ಅಜ್ಞೇಯತಾವಾದಿ ಅಲ್ಲ.ಎಲಾ ಮತಗಳ ಪೂಜೆ, ಪುಣ್ಯಾಹಗಳಲ್ಲಿ ಭಾಗವಹಿಸುತ್ತಿದ್ದರು. ಜವಾಬ್ದಾರಿ ದಕ್ಷ ನಿರ್ವಹಣೆ, ಲೋಕ ಕಲ್ಯಾಣ ಕಾರ್ಯದಲ್ಲಿ ಮಗ್ನತೆ, ಅವರ ಪೂಜೆ, ಪರರ ಕಷ್ಟ ನಿವಾರಣೆಯ ನಿರೂಪಣೆ, ಅವರ ನಿರಂತರದ ಧ್ಯಾನ. ವಿವೇಕಾನಂದರು ಹೇಳಿರುವಂತೆ, ಅನುದಿನ ಬಡವರಿಗಾಗಿ ದುಡಿದ ಕರಿಯುಪ್ಪನವರೇ ಮಹಾತ್ಮ. ಆಚಾರಗಳನ್ನೆಲ್ಲ ಕಟ್ಟಿಟ್ಟು, ಕಷ್ಟದಲ್ಲಿದ್ದ ಮಾನವರನ್ನು ಸೇವಿಸಿದನು ಈ ಮಹಾನುಭಾವ. ದೇವರನ್ನು ದೂರ ದಲ್ಲಿ ಹುಡುಕುವುದನ್ನು ಬಿಟ್ಟು, ಹಸುವಿನಿಂದ ಬಳಲಿದ ಅಶಕ್ತರನ್ನು ಪೂಜಿಸಿದ ಪೂಜ್ಯ, ವಿದ್ಯಾಹೀನರಿಗೆ ಅಜ್ಞಾನಿಗಳಿಗೆ ಬೆಳಕು ಕೊಟ್ಟ, ಈ ಪಾವನಾತ್ಮ. ಪ್ರಪಂಚ, ಇಂಥ ಜ್ಞಾನ ಭಕ್ತರಿಗಾಗಿ ಕಾಯುತ್ತಿದೆ.

## ಕಾಂಟರು

ಯೂರೋಪಿನ ಶ್ರೇಷ್ಠ ತತ್ವಜ್ಞಾನಿ ಮತ್ತು ದೇವತಾ ಶಾಸ್ತ್ರಜ್ಞರಾದ ಕಾಂಟರ ಅಭಿಪ್ರಾಯ ಅಮೂಲ್ಯವಾದದು. ಅವರ ಪ್ರಭಾವ ನಿರ್ಧಾರಕವಾಗಿದೆ.

ಕಾಂಟರು ದೇವರ ಅಸ್ತಿತ್ವದ ಶ್ರದ್ಧೆಯಲ್ಲಿ ಪೋಷಿಸಲ್ಪಟ್ಟವರು. ಬಹು ವರ್ಷಗಳ ಗಾಢವಾದ ಚಿಂತನೆಯಿಂದ ತಮ್ಮ ತತ್ವಗಳನ್ನು ವಿಶ್ವಹಿತ ಕ್ಕಾಗಿ ವಿವರಿಸಿದರು - ಮಾನವ ಕಲ್ಯಾಣವೇ ಆಧ್ಯಾತ್ಮಿಕದ ಅಸ್ತಿಭಾರ. ಆಧ್ಯಾತ್ಮಿಕ ಆಲೋಚನೆಗಳಲ್ಲಿ, ಇನ್ನೊಬ್ಬರ ಹೇಳಿಕೆಗಳಲ್ಲಿ ಅಪ್ರಭಾವ ರಾಗಿ ಸ್ವತಂತ್ರ್ಯ ವಿವೇಚನೆ ಅತ್ಯವಶ್ಯಕ. ಸಮರ್ಥನೆಯ ಆಧಾರ ಅಥವಾ ವೈಚಾರಿಕತೆ ಅನಿವಾರ್ಯ. ಸತ್ಯದ ಧೃಢೀಕರಣೆಗೆ ಮನಃಸ್ಸಾಕ್ಷಿ ಅಗತ್ಯ

ಸಂಪ್ರದಾಯ, ಮೂಢಾಚರಣೆ ಮತ್ತು ಪುರೋಹಿತ ಪ್ರಾಮುಖ್ಯತೆ ನಿಜವನ್ನು ಮರೆಮಾಚುತ್ತದೆ. ಪ್ರಾಚೀನ ಕಾಲದಿಂದ ಬಂದಿರುವ ಅಲೌಕಿಕತೆ ವಿವಾದಾಸ್ಪದ. ಸಮಾಜಹಿತ ಕರ್ತವ್ಯದ ಹೊಣೆಗಾರಿಕೆಯಿಂದ ತತ್ವಗಳ ವಿವೇಚನೆಯಾಗಬೇಕು. ಮಾನವ ಸ್ವಾಭಾವಿಕ ಗುಣವಾದ ವೈಚಾರಿಕತೆ ತನ್ನ ಸಾರ್ವಭೌಮತ್ವವನ್ನು ಚಲಾಯಿಸಬೇಕಾಗಿದೆ. ಪರಿಪೂರ್ಣತೆಯ ಪ್ರಗತಿ ನಿಧಾನವಾದರೂ ಜಯ ನಿಶ್ಚಿತ.

ಕಾಂಟರು ಮುಂದೆ ಹೇಳಿದರು - ದೇವರ ಅಸ್ತಿತ್ವವನ್ನು ರುಜುವಾತು ಮಾಡುವುದು ಅಸಾಧ್ಯವಾದರೂ, ಅವನಲ್ಲಿ ನಂಬಿಕೆ ಇಡುವುದರಿಂದ ಮಾನವ ಕುಲಕ್ಕೆ ಕ್ಷೇಮ. ಆ ಶ್ರದ್ಧೆ ಆಳವಾಗಿದೆ. ಅಭೇದ್ಯವಾಗಿದೆ. ಅದನ್ನು ಅಲುಗಾಡಿಸುವ ಅವಶ್ಯಕತೆ ಇಲ್ಲ. ಅದರ ಭದ್ರತೆ, ಸಮಾಜ ಶ್ರೇಯಸ್ಸಿನ ಬುನಾದಿ. ಆ ಶ್ರದ್ಧೆಯ ಮೂಲಕ ನೈತಿಕ ತಳಹದಿಯನ್ನು ಭದ್ರಪಡಿಸಿ, ಮಾನವ ಸ್ವಾಭಾವಿಕ ಸದ್ಗುಣಗಳನ್ನು ಪೋಷಿಸಬೇಕು. ವಿಶ್ವಬಾಂಧವ್ಯಕ್ಕೆ ಅವಶ್ಯವಾದ ನ್ಯಾಯ, ನೀತಿ, ಧರ್ಮಗಳು ದೈವ ಶ್ರದ್ಧೆಯಿಂದ ಶಕ್ತಿಯುತವಾಗುತ್ತವೆ.

# ಲೋಕಮಾನ್ಯ ತಿಲಕರು

ಭಾರತ ಸ್ವಾತಂತ್ರ್ಯ ಸಮರಕ್ಕೆ ಅಗ್ರಪೂಜೆ ಸಲ್ಲಿಸಿದ ಲೋಕಮಾನ್ಯ ತಿಲಕರು ಈ ರೀತಿ ಅಭಿಪ್ರಾಯ ಪಟ್ಟಿದ್ದಾರೆ.

ಜನಸಾಮಾನ್ಯರ ಸ್ಥಿತಿ ಚಿಂತಾಜನಕವಾಗಿರುವಾಗ, ವಾತಾವರಣ ಧಗ-ಧಗಿಸುತ್ತಿರುವಾಗ, ಆಧ್ಯಾತ್ಮಿಕದ ಆನಂದದಲ್ಲಿ ಮುಳುಗಿರುವುದು ಸ್ವಾರ್ಥತೆಯ ಪರಮಾವಧಿ. ದೇವರನ್ನು ಹುಡುಕಿ ಪ್ರತ್ಯಕ್ಷ ಪಡಿಸಿಕೊಳ್ಳಬೇಕೆಂಬ ಹುಚ್ಚೇ ಭಾರತೀಯರ ಪರಾಧೀನತೆಗೆ ಕಾರಣ. ಜನತೆಯ ಧರ್ಮ ಅಂದಿನ ಇತಿಹಾಸ ಸಂದರ್ಭಗಳು ನಿರ್ಣಯಿಸಬೇಕು. ಪರಾಧೀನತೆಯ ಧರ್ಮ ಎಡಬಿಡದ ಹೋರಾಟ. ಬ್ರಿಟಿಷರನ್ನು ಬಿಟ್ಟೋಡಿಸು

ಮಮಕಾರವಿಗೂ ಇನ್ಯಾವ ಧರ್ಮವೂ ಇಲ್ಲ.ಅನ್ಯಾಯಗಳಿಂದ ಅಪ್ಪಳಿಸಲ್ಪಟ್ಟಿರುವ ಅನಾಥನ ರಕ್ಷಣೆಯೇ ಶ್ರೇಷ್ಠ ಧರ್ಮ.

## ಮದರ್ ಥೆರೆಸಾ

ಬಡವರ ಬಗೆಗಿನ ಕೋಮಲವಾದ ಪ್ರೀತಿ ಮತ್ತು ಕಾಳಜಿ ಮಾತ್ರ, ದೇವರ ಸೇವೆ ಮಾಡುವ ಅತ್ಯುತ್ತಮ ಮಾರ್ಗ. (ಲಿಯೋ ಟಾಲ್ಸ್ಟಾಯ್, ಅಂತರ್ರಾಷ್ಟ್ರೀಯ ಪ್ರಶಸ್ತಿ ಸ್ವೀಕರಿಸುವಾಗ ಹೇಳಿದ ದಿವ್ಯ ವಾಣಿ.)

## ಗಾಂಧೀಜಿಯವರು

ಅತೀ ವಿನಯದಿಂದ ಗಾಂಧಿ ಹೇಳಿದರು – "ನಾನು ನರಸೇವೆಯಿಂದ ನಾರಾಯಣನನ್ನು ನೋಡಲು ಪ್ರಯತ್ನ ಪಡುತ್ತಿದ್ದೇನೆ. ದೇವರು ಸ್ವರ್ಗ ಅಥವ ಕೆಳಗಿಲ್ಲ. ದೇವರಿಲ್ಲದ ಜಾಗವಿಲ್ಲ ಸೃಷ್ಟಿಯ ಪ್ರತಿಯೊಂದು ಕ್ರಿಯೆಯಲ್ಲೂ ದೇವರನ್ನು ಕಾಣುತ್ತೇನೆ. ಅದಕ್ಕೆ ಸರ್ವರ ಸೇವೆಯೊಂದೇ ಮಾರ್ಗ. ನಾನೊಬ್ಬ ಭಾರತದ ಸಾಮಾನ್ಯ ಸೇವಕ. ಭಾರತದ ಸೇವೆಯ ಮೂಲಕ ಇಡೀ ವಿಶ್ವದ ಸೇವೆ ಸಲ್ಲಿಸುತ್ತಿದ್ದೇನೆ. ಅನಾಥರ ಸೇವೆ ಮತ್ತು ತ್ಯಾಗವೇ ಪ್ರತೀ ಮತದ ಧರ್ಮ. ದೇವರು ಕೈಲಾಗದವರ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ದೇವರೆಂಬ ಭಾವನೆಯಿಂದ ವಿಶ್ವ ವಿಶ್ವಾಸಕ್ಕೇ ಇರುವ ಅಗಾಧ ಅವಕಾಶಗಳ ಅರಿವು ನನಗಾಗಿದೆ".

"ನನಗೆ ದೈವವಾಣಿ, ಆತ್ಮ, ಸತ್ಯ, ಅಂತರಾತ್ಮ, ಸೂಕ್ಷ್ಮವಾಣಿ, ಇವೆಲ್ಲಾ ಒಂದೇ. ನಾನು ಎಂದೂ ದೇವರ ರೂಪ ಕಾಣೆ. ಅವನ್ನು ಕಾಣಲು ಪ್ರಯತ್ನ ಪಡಲಿಲ್ಲ. ಕಾರಣವೇನೆಂದರೆ ದೇವರಿಗೆ ರೂಪವೇ ಇಲ್ಲ ಎಂಬುದೇ ನನ್ನ ನಂಬಿಕೆ. ಆದರೆ ದೈವವಾಣಿಯನ್ನು ಖಂಡಿತಾ ಕೇಳಿದ್ದೇನೆ. ಆದರೆ ಅದಕ್ಕೆ ರುಜುವಾತು ಕೊಡಲಾರೆ. ಶ್ರದ್ಧೆಯಿಂದ

ಪ್ರಯತ್ನ ಪಟ್ಟವರೆಲ್ಲಾ ಅದನ್ನು ಕೇಳಬಹುದು ಎಂಬುದೇ ನನ್ನ ನಂಬಿಕೆ." "ಪ್ರತಿಯೊಬ್ಬರೂ ಅನುಭವಿಸಬಹುದಾದ ಒಂದು ಅಪರೂಪ ವಸ್ತು ಅದು. ಆದರೆ ಅದು ಏನು ಎಂದು ವರ್ಣಿಸಲು ಅಸಾಧ್ಯ. ನನಗೆ ದೇವರೆಂದರೆ ಸತ್ಯ, ಪ್ರೀತಿ ಮತ್ತು ಸತ್ಯವೇ ದೇವರು. ದೇವರೇ ನೀತಿ, ನಿಯಮ, ನಿರ್ಭಯ, ಜ್ಞಾನದ ಮೂಲ, ಅಲ್ಲದೆ ಇದಕ್ಕಿಂತ ಶ್ರೇಷ್ಠ. ದೇವರೇ ಆತ್ಮ. ನಾಸ್ತಿಕರ ನಾಸ್ತಿಕತ್ವವೂ ದೇವರೇ. ಅವನು ಮಾತು ಮತ್ತು ಸಮರ್ಥನೆ ಮೀರಿದವನು. ನನಗೆ ದೇವರಲ್ಲಿರುವ ಶ್ರದ್ಧೆ ಹೇಗೆ, ಏನು ಎಂದು ವರ್ಣಿಸಲು ಅಸಾಧ್ಯ."

ಗಾಂಧೀಜಿಯವರಿಗೆ ನೈತಿಕ ನಿಯಮವೇ ದೇವರು ಎಂಬ ಗಾಢನಂಬಿಕೆ. ಕಾಯಾ, ವಾಚಾ, ಮನಸಾ, ನೈತಿಕ ಶಿಸ್ತಿನ ಅನುಸರಣೆ ಅವರನ್ನು ಮಹಾತ್ಮರ ಅಂತಸ್ತಿಗೇರಿಸಿತು. ಕೊನೆಕೊನೆಗೆ ಸತ್ಯವೆಂಬುದೇ ದೇವರು ಎಂಬ ಸತ್ಯವನ್ನು ಸಾರಿದರು. ಗಾಂಧೀಜಿಯವರು ನಿಜ ಸತ್ಯಾಗ್ರಹಿ. ಅದರ ಬಲದಿಂದಲೇ ವಿಶ್ವ ಚಕ್ರಾಧಿಪತಿಗಳಾದ ಬ್ರಿಟಿಷರನ್ನು ತಪ್ಪು ಒಪ್ಪುವಂತೆ ಮಾಡಿದರು.

ಈ ಹತ್ತು ನಿಯಮಗಳು ಗಾಂಧೀಜಿಯವರ ಜೀವನದ ದಾರಿದೀಪಗಳು.
1 ಸತ್ಯ 2 ಅಹಿಂಸೆ 3 ಬ್ರಹ್ಮಚರ್ಯ 4 ಚಪಲತೆಯ ನಾಲಿಗೆಯ ಅಂಕೆ 5 ಅನಾವಶ್ಯಕ ಸಾಮಾನುಗಳ ನಿರಾಕರಣೆ 6 ಕಾಯಕ 7 ಸ್ವದೇಶಿ-ಸೇವೆ 8 ಮಾನವತೆಯ ಸಮಾನತೆ 9 ಪರಮತಗಳಿಗೇ ಗೌರವ 10 ಅಭಯ

"ಸತ್ಯವೇ ಸನಾತನ ಧರ್ಮ. ಸತ್ಯವೇ ಸನಾತನ ಬ್ರಹ್ಮ, ಸತ್ಯವೇ ಶ್ರೇಷ್ಠವಾದ ಯಜ್ಞ, ಎಲ್ಲವೂ ಸತ್ಯದಲ್ಲಿ ನೆಲೆಗೊಂಡಿದೆ. ಸತ್ಯದ ಘಟಕಗಳು ಅಥವ ರೂಪಗಳು :— ಸಮತೆ, ದಮ, ಮಾತ್ಸರ್ಯ-ರಾಹಿತ್ಯ, ಕ್ಷಮೆ, ಲಜ್ಜೆ, ಸಹನೆ, ಅನಸೂಯೆ, ತ್ಯಾಗ, ಧ್ಯಾನ ಆರ್ಯತ್ವ, ಧೃತಿ, ದಯೆ, ಅಹಿಂಸೆ." (ಮಹಾಭಾರತ ಶಾಂತಿಪರ್ವ.)

ನಮ್ಮ ಋಷಿಗಳು ಶತಮಾನಗಳ ಕಾಲ ಪರೀಕ್ಷಿಸಿ ಸತ್ಯ-ನಿತ್ಯ, ಸನಾತನ, ನಿರಂತರ ಎಂದು ಸಾರಿದರು. ಸತ್ಯವನ್ನು ಮರೆಮಾಚಲು ಅಥವ ನಿರ್ಮೂಲ ಮಾಡಲು ಅಸಾಧ್ಯ ಎಂದು ಧೃಢಪಡಿಸಿದರು. ಸತ್ಯಕ್ಕೆ ಅಡಚಣೆಗಳು ಅನೇಕ. ಅದನ್ನು ಅದುಮಿಡುವ ಪ್ರಯತ್ನದಲ್ಲಿ ಅಸಂಖ್ಯ ಚಕ್ರಾಧಿಪತ್ಯಗಳು ನಾಶವಾಗಿವೆ. ಸತ್ಯವಂತನೇ ಅತ್ಯುತ್ತಮ ಮಾನವ. ನಮ್ಮ ಪ್ರಾಚೀನರು ಸತ್ಯಕ್ಕೋಸ್ಕರ ಏನನ್ನು ಬೇಕಾದರೂ ತ್ಯಾಗ ಮಾಡಲು ಸಿದ್ಧರಾಗಿದ್ದರು. ಇದನ್ನು ಅನುಸರಿಸಿ "ಸತ್ಯ ಮೇವ ಜಯತೇ" ಅನ್ನು ನಮ್ಮ ರಾಷ್ಟ್ರದ ಧ್ಯೇಯ ಮಂತ್ರವನ್ನಾಗಿ ಪಟ್ಟ ಕಟ್ಟಿದ್ದೇವೆ. ಸತ್ಯ ಉಪಾಸಕನ ಭಾವನೆ ವಿಶ್ವವ್ಯಾಪ್ತಿಯು. ಸರ್ವ ಪ್ರಾಣಿಗಳ ಅಂತರಾಳದಲ್ಲಿ ನೆಲೆಸಿರುವ ಆತ್ಮ ಒಂದೇ ಎಂಬ ಮನೋಭಾವದ್ವ ತತ್ವವೇ ಧರ್ಮ – ಧರ್ಮ ಚಕ್ರ ನಮ್ಮ ರಾಷ್ಟ್ರದ ಬಾವುಟವನ್ನು ಅಲಂಕರಿಸಿದೆ.

## ಬಸವಣ್ಣನವರು

ಯುಗ ಪ್ರವರ್ತಕ, ಶ್ರೇಷ್ಠ ಸುಧಾರಕ, ವಿಶ್ವಪ್ರೇಮಿ. ಸಮಷ್ಟಿಯ ಸರ್ವತೋಮುಖ ಪ್ರಗತಿ ಕೈಗೂಡಿಸಿಕೊಂಡ ಚೈತನ್ಯಕಾರಿ. ಸ್ಖಲಿತ ರಾಜಕೀಯವನ್ನು ಶುದ್ಧೀಕರಿಸಿ ವಾಸ್ತವಿಕ ಜಗತ್ತನ್ನು ಗುರುತಿಸಿದ ಜಗದ್ಗುರು ಮಣ್ಣಿನಿಂದ ಮಾನವನನ್ನು ಸೃಷ್ಟಿಸಿ, ದೈವತ್ವಕ್ಕೆ ದಾಟಿಸುವ ಪ್ರಯತ್ನ ಮಾಡಿದ ಧನ್ಯ ಪುರುಷನ ಬೋಧನೆ ಅತ್ಯುಪಯೋಗ.

"ದೇವರೊಬ್ಬ ನಾಮ ಹಲವು"

'ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಬೋ !'

'ಸತ್ಯವ ನುಡಿಯುವುದೇ ದೇವಲೋಕ,

ಮಿಥ್ಯವ ನುಡಿಯುವುದೇ ಮರ್ತ್ಯಲೋಕ !'

ಹರನೆಂಬುದೇ ಸತ್ಯ

ಸತ್ಯವೆಂಬುದೇ ಹರನು (ರಾಘವಾಂಕ ಹರಿಶ್ಚಂದ್ರ ಕಾವ್ಯದಲ್ಲಿ)

ದಿಟಕ್ಕೆ ಮುಚ್ಚುರವೇಕೆ ? (ಕುವೆಂಪು)

ಸೌಂದರ್ಯವೇ ಸತ್ಯ, ಸತ್ಯವೇ ದೇವರು,
ಲೋಕದಿ ಗೋಚರಿಸುವುದೆಲ್ಲಾ ಇದುವೇ,
ನೀನರಿಯ ಬೇಕಾದುದೆಲ್ಲಾ ಇದುವೇ (ಜಾನ್ ಕೀಟ್ಸ್)

ಪ್ರಾಮಾಣಿಕ ಮನುಷ್ಯನೇ ಪರಮಾತ್ಮನ
ಉದಾತ್ತ ಸೃಷ್ಟಿ. (ಪೋಪರು)

ಸತ್ಯವೆಂಬುದೊಂದು ಮಹಾವಸ್ತು
ಎಲ್ಲಾ ವಸ್ತುಗಳಿಗಿಂತಲೂ ಬಲಿಷ್ಠವಾದುದು (ಬೈಬಲ್)

ಸತ್ಯವೇ ಶ್ರೇಷ್ಠ ಧರ್ಮ, ವಿಶ್ವದ ಶಾಸನ ಅದು ಸರ್ವಮಂಗಳಕ್ಕೂ ಮೂಲ. ಪ್ರಭುತ್ವ ನಡೆಸುವ ಶಕ್ತಿ ಅದರಲ್ಲಿದೆ ಸತ್ಯವೇ ಪ್ರತೀ ವಸ್ತುವಿನ ಮೂಲ. ಸತ್ಯಕ್ಕಿಂತ ಮಿಗಿಲಾದುದು ಇನ್ನೊಂದಿಲ್ಲ

ದೈವಶ್ರದ್ಧೆ ಮಾನವನ ಹೃದಯಾಂತರಾಳದಲ್ಲಿ ಆಳವಾಗಿ ಬೇರುಬಿಟ್ಟಿದೆ, ರೂಢಮೂಲವಾಗಿದೆ. ಗಾಢ ಪ್ರಭಾವವನ್ನು ಬೀರಿದೆ. ಅದು ಅಬೇಧ್ಯ. ದೇವರ ಅಸ್ತಿತ್ವಕ್ಕೆ ವೈಜ್ಞಾನಿಕ ರುಜುವಾತು ಅನಾವಶ್ಯಕ. ದೈವಭಕ್ತಿಗೆ ಜೋಡಿಯಾಗಿರುವ ಭಾವೋದ್ರೇಕಗಳ ನಿಯಂತ್ರಿಸುವ ನೀತಿ-ನಿಯಮಗಳ ಪಾಲನೆ, ಲಾಭದಾಯಕ. ಧ್ಯಾನದಿಂದ ಚಿತ್ತೈಕಾಗ್ರತೆ, ಶಕ್ತಿಯುತವಾಗುತ್ತದೆ. ಸ್ಥಿರತೆ, ಮಗ್ನತೆ ಮತ್ತು ತಲ್ಲೀನತೆಗಳಿಂದ ಕೈಗೊಂಡ ಕಾರ್ಯಗಳಲ್ಲೆಲ್ಲಾ ಜಯ ಮತ್ತು ಶ್ರದ್ಧೆಯಿಂದ ಮಾಡಿದ ಕೆಲಸಗಳು ಮಾತ್ರ ಫಲಕಾರಿ ಮತ್ತು ಯಶಸ್ಸುದಾಯಕ. ಪ್ರತಿಯೊಂದು ಮತದ ಧರ್ಮಶಾಸ್ತ್ರವೂ ಸರ್ವಕಾಲಕ್ಕೂ ಹೇಳಿರುವ ನೀತಿ ಬೋಧೆ, ಏಕರೀತಿಯಾಗಿದೆ. ಸುಗುಣ, ದುರ್ಗುಣಗಳ ಮಿಶ್ರಣವೇ ಮನುಷ್ಯ. ದುರ್ಗುಣಗಳನ್ನು ದೂರಮಾಡಿ, ಸುಗುಣಗಳನ್ನು ಸ್ವ-ಸಂಸ್ಕಾರದಿಂದ ರಕ್ತಗತಮಾಡಿಕೊಂಡು ಜೀವನ ಸಾರ್ಥಕ ಮಾಡಿಕೊಳ್ಳಿ ಎಂಬ ಬೋಧೆಯೇ ಧರ್ಮಗ್ರಂಥಗಳ ಸಾರ. ಈ ತಪ್ಪು ನೆಪ್ಪುಗಳ

ವಿಶ್ಲೇಷಣೆಯೇ ಅಂತರ್ವೀಕ್ಷಣೆ. ಈ ಅಂತರ್ವೀಕ್ಷಣೆಯಿಂದ, ನೈತಿಕ ಮೌಲ್ಯಗಳನ್ನು ಪೂರ್ಣ ರೀತಿಯಲ್ಲಿ ಬೆಳಸಿಕೊಂಡವರೇ ಮಹಾತ್ಮರ ಶ್ರೇಣಿಗೆ ಏರಿ, ಲೋಕ ಕಲ್ಯಾಣರಾಗಿ ರಂಜಿಸುತ್ತಿರುವವರು. ಇವರೇ ವಿಶ್ವ ಮಾನವರು.

ಸ್ವಾಮಿವಿವೇಕಾನಂದರ ವಿಶ್ಲೇಷಣೆಯಂತೆ, ದೇವರ ಭಾವನೆ ಸಂಪೂರ್ಣತೆ, ಪರಿಪೂರ್ಣತೆ, ಅಖಂಡತೆ, ಅನ್ಯೋನ್ಯತೆ, ಪ್ರವೀಣತೆ, ಪಾರಂಗತೆ, ಯಥಾರ್ಥತೆ, ಪೂರ್ಣ ವಿಕಾಸತೆ, ಕೌಶಲ್ಯ, ಸ್ವಸ್ಥತೆ, ಶಾಂತಿ, ಸಮಾಧಾನ, ಸಂತೋಷ ಮುಂತಾದ ಶ್ರೇಷ್ಠಗುಣಗಳ ಕೇಂದ್ರ. ವಿಶ್ರಾಂತ ವಿವೇಕಾನಂದರು ವಿಶ್ವಮಾನವರಾಗಿ, ವಿಖ್ಯಾತಿ ಪಡೆದು, ವಿಕರ್ಶನಂತೆ ವಿಜೃಂಭಿಸಿದುದು, ಆಧ್ಯಾತ್ಮಿಕತೆಯನ್ನು ಅರಗಿಸಿಕೊಂಡಿದ್ದದರ ಫಲ.

ನಿಜ ಸತ್ಯಾಗ್ರಹಿಯಾದ, ಏಕಪುರುಷ ಗಾಂಧೀಜಿ ಸುಗುಣ ಶ್ರೇಷ್ಠರ ಸಾಲಿಗೆ ಏರಿ ಮಹಾತ್ಮರಾಗಿ ರಂಜಿಸುತ್ತಿದ್ದಾರೆ ಲೋಕ ಕಲ್ಯಾಣಕ್ಕಾಗಿ ಚಕ್ರಾಧಿಪತ್ಯವನ್ನು ತ್ಯಜಿಸಿ ಧ್ಯಾನಮಗ್ನನಾದ ಗೌತಮ ಬುದ್ಧ ಅದ್ಭುತ ಆದರ್ಶ. ದೈವಶ್ರದ್ಧೆಯಿಂದಲೇ ವಿಶ್ವದ, ಎಲ್ಲಾ ಅವತಾರ ಪುರುಷರು ಮಹಾತ್ಮರು, ಪ್ರವಾದಿಗಳು, ಸಂತರು, ಋಷಿಗಳು, ಪಂಡಿತರು, ಕವಿಗಳು ಅಲ್ಲದೆ ಚಿಂತನೆಯ ಮತ್ತು ಕಾರ್ಯಗಳ ಪ್ರಸಿದ್ಧ ನಾಯಕರುಗಳೆಲ್ಲ ಲೋಕ ಕಲ್ಯಾಣ ಕಾರ್ಯಗಳನ್ನು ನಡೆಸಿ, ದಿವ್ಯತೆಯ ದಿಗಂತಕ್ಕೇರಿ ಮಾನವರಿಗೆ ಮಾದರಿಯಾಗಿರುವುದು.

ತಪ್ಪನ್ನು ತಿದ್ದಿಕೊಳ್ಳುತ್ತಾ ಬರುವುದೇ ವಿಕಾಸ ಒಳಿತೆಂಬುದು ದೇವರಿಂದ ಸಿದ್ಧವಾಗಿ ಬರುವ ವಸ್ತುವಲ್ಲ. ನಿಜವಾದ ದೈವಭಕ್ತ, ತಾನು ಉತ್ತಮನೆಂದು ಸ್ತುತಿಸಿಕೊಂಡು, ಪರರು ಕೀಳು ಎಂಬ ಮನೋಭಾವದಿಂದ ಅವರ ನಿಂದನೆ, ತಿರಸ್ಕಾರ, ದೂಷಣೆ ಅಲ್ಲದೆ ವೈರತ್ವ, ಹಗೆತನ, ಮಾಡನು. ಕಾಯಾ ವಾಚಾ ಮನಸಾ ಸುಳ್ಳು, ಕಳ್ಳತನ, ವ್ಯಭಿಚಾರ, ಪರರ ಸ್ವತ್ತಿನ ಆಸೆ ಮಾಡನು. ಕಾಡು ಹರಟೆ, ಮೈಗಳ್ಳತನ ವೃಥಾಲಾಪ, ಜೂಜು, ಮದ್ಯಪಾನ, ಭ್ರಷ್ಟತೆ ಮುಂತಾದ ಕೆಡುಕು

ಗಳಿಂದ ದೂರನಾಗಿರುತ್ತಾನೆ. ಅಂಥ ದುರ್ಬಲಕ್ಕೆ ತುತ್ತಾದಾಗ ದೇವ ರನ್ನು ನೆನೆದು, ವಿಷದಂತೆ ವರ್ಜಿಸುತ್ತಾನೆ. ತಾನು ಬೆವರರಿಸಿದ ಹಣ ದಿಂದ ದೇವರ ಪೂಜೆ, ಯಾತ್ರೆ, ನಿಷ್ಪ್ರಯೋಜಕ. ಮಾನವ ಸುಗುಣ ದುರ್ಗುಣಗಳ ಮಿಶ್ರಣ. ದುರ್ಗುಣಗಳನ್ನು ದೂರಮಾಡಿ ಸುಗುಣ ಗಳನ್ನು ವರ್ಧಿಸಿಕೊಳ್ಳುವುದಕ್ಕೆ ದೇವರ ಸಹಾಯು ಇದ್ದೇ ಇದೆ. ಇದಕ್ಕೆ ಬೇಕಾದ ತಪ್ಪೊಪ್ಪಿಗೆ ಮತ್ತು ಸುಧಾರಣೆ ಪ್ರತೀ ಘಳಿಗೆಯಲ್ಲೂ ನಡೆಯಬೇಕು. ಇದೇ ವ್ಯಕ್ತಿಯ, ಸಮಾಜದ, ರಾಷ್ಟ್ರದ ವಿಕಾಸ ಮಾರ್ಗ. ಇದೇ ಪ್ರಗತಿಯ ಪಥ.

ಆತ್ಮ ಸಂಯಮ, ಆತ್ಮ ಸಂಸ್ಕಾರ, ಆತ್ಮ ವ್ಯವಸಾಯ, ಧೃಢನಿರ್ಧಾರ ಅನಾಸಕ್ತಿ ಮತ್ತು ವಿಪುಲ ವಿವೇಚನೆ ಇವುಗಳೇ ಈ ಶಿಖರಕ್ಕೇರುವ ಏಣಿಯ ಮೆಟ್ಟಿಲುಗಳು. ಈ ತುತ್ತ ತುದಿಗೆ ಏರಿದ ಮಹಾಶಯರ ಹೃದಯ ಸರ್ವಜೀವಿಮುಖವಾಗಿ ವಿಶ್ವವ್ಯಾಪಕತೆಯನ್ನು ಆವರಿಸಿ ಕೊಳ್ಳುವುದು ತನ್ನೆಲ್ಲಾ ಮಕ್ಕಳನ್ನು ಸಮಭಾವದಿಂದ ಕಾಣುವ ಹೆತ್ತತಾಯಿ ಇಂಥ ಪರಾಕಾಷ್ಟತೆಯ ಸಂಕೇತ. ಆದುದರಿಂದಲೇ ತಾಯಿ ದೇವರ ಸಮಾನ ಎಂಬ ಭಾವನೆ ರೂಢಿಯಲ್ಲಿರುವುದು. ಭಗ ವಂತನನ್ನು ಜಗದ್ರಕ್ಷ-ಜಗನ್ಮಾತೆ ಎಂದು ಪೂಜಿಸುವುದು. ಈ ಶ್ರೇಷ್ಠ ಮತ್ತು ವಿಶಿಷ್ಠ ಮಾನವರು, ಸಹನೆಯ ಪ್ರತಿರೂಪವಾಗಿ ಪರರ ಸುಖಕ್ಕೆ ತಮ್ಮ ಸರ್ವಶಕ್ತಿಯನ್ನು ಬಳಸಿ, ತಮ್ಮ ಸರ್ವಸ್ವವನ್ನೂ ಧಾರೆ ಎರೆಯುತ್ತಾರೆ. ಶೋಷಣೆ, ಅನ್ಯಾಯ, ಅಪರಾಧಗಳು ತನ್ನವರಿಗಲ್ಲದೆ ತಮ್ಮ ವೈರಿಗಳಿಗೆ ಸಂಭವಿಸಿದರೂ ಅದನ್ನು ಪ್ರಚಂಡ ಶಕ್ತಿಯಿಂದ ಖಂಡಿಸುತ್ತಾರೆ. ಇದೇ ಪ್ರೀತಿಯ ನಿಜ ಅರ್ಥ. ಪರರ ಕಷ್ಟಕ್ಕೆ ಸ್ಪಂದಿಸುವುದೇ ಶ್ರೇಷ್ಠರ ಲಕ್ಷಣ.

ಒಳ್ಳೆಯ ಕೆಲಸಗಳನ್ನು ಮಾಡುತ್ತಾ ಹೋದರೆ, ಉತ್ತಮ ಸಂಸ್ಕಾರ ವೃದ್ಧಿಯಾಗುತ್ತದೆ. ಮುಂದೆ ಸುಕಾರ್ಯದಲ್ಲಿ ಆಸಕ್ತರಾಗುವಂತೆ ಸದಾ ಪ್ರೇರಣೆ ದೊರೆಯುತ್ತದೆ. ಪ್ರತೀ ಘಳಿಗೆಯಲ್ಲೂ ನಮ್ಮ ವರ್ತನೆಯ ಬಗ್ಗೆ ಎಚ್ಚರಿಕೆ ಇರಬೇಕು. ಧರ್ಮ, ನೀತಿ, ವಿವೇಕಗಳಿಂದ ನಡೆಯು

ಬೇಕು. ಆತ್ಮ ಶಕ್ತಿಯಲ್ಲಿ ಅಥವಾ ಸ್ವಶಕ್ತಿಯಲ್ಲಿ ನಂಬಿಕೆ ಜಾಗ್ರತ ವಾದರೆ ನಮ್ಮ ದೌರ್ಬಲ್ಯಗಳು ದೂರವಾಗುತ್ತವೆ. (ಸ್ವಾಮಿ ವಿವೇಕಾನಂದರು)

ಮಹಾತ್ಮ ಗಾಂಧಿ ಮೂರು ಮಂಗಗಳ ಆಕೃತಿಗಳನ್ನು ಮುಂದಿಟ್ಟು ಕೊಂಡಿದ್ದರು. 1) ಅಧರ್ಮ, ಅಸತ್ಯವಾದುದನ್ನು ನಾಲಿಗೆ ನುಡಿಯ ಬಾರದು. 2) ಕೆಟ್ಟದ್ದನ್ನು ಕಣ್ಣಿಂದ ನೋಡಬಾರದು. 3) ಮತ್ತು ಕೆಟ್ಟದ್ದನ್ನು ಕೇಳಬಾರದು ಎಂಬುವು ಶೀಲವರ್ಧನೆಯ ಸಂಕೇತಗಳು ಬಸವಣ್ಣನವರು ನೈತಿಕ ಸಂಪತ್ತನ್ನು ಹೀಗೆ ವರ್ಣಿಸಿದ್ದಾರೆ.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲ ಸಂಗಮದೇವನೊಲಿಸುವ ಪರಿ.

ಭಗವದ್ಗೀತೆ ದೈವೀ ಗುಣಗಳನ್ನು ಹೀಗೆ ವರ್ಣಿಸಿದೆ :— ಅಭಯ, ಸತ್ವಸಂಶುದ್ಧಿ, ಜ್ಞಾನ ಯೋಗದಲ್ಲಿ ಸ್ಥಿರ ಮತಿತ್ವ, ದಾನ, ಧರ್ಮ, ಯಜ್ಞ, ಸ್ವಾಧ್ಯಾಯ, ತಪಸ್ಸು, ನಿರ್ಮಲ ಹೃದಯ, ಅಹಿಂಸೆ, ಅಕ್ರೋಧ, ತ್ಯಾಗ, ಶಾಂತಿ, ಚಾಡಿ ಹೇಳದಿರುವಿಕೆ, ತೇಜಸ್ಸು, ಕ್ಷಮೆ ಧೃತಿ, ಶೌಚ, ಅದ್ರೋಹ, ನಿರಹಂಕಾರತೆ. ಗೀತೆ 16-1-3

ಪ್ರಪಂಚವು ಸತ್ಯ,ಅಸತ್ಯಗಳೆಂಬ ಸಕ್ಕರೆ ಮತ್ತು ಮರಳುಗಳ ರಾಶಿ. ಇರುವೆ ಸಕ್ಕರೆಯನ್ನೇ ಸ್ವೀಕರಿಸುವಂತೆ, ಮನುಷ್ಯ ಸತ್ಯವನ್ನೇ ಹಿಡಿದುಕೊಳ್ಳ ಬೇಕು. ಪ್ರಪಂಚ ಕೆಟ್ಟದ್ದು ಮತ್ತು ಒಳ್ಳೆಯದರ ಮಿಶ್ರಣ. ಹಂಸ ನೀರನ್ನು ತ್ಯಜಿಸಿ ಹಾಲನ್ನು ಕುಡಿಯುತ್ತದೆ. ಅದರಂತೆ ಮಾನವ ಒಳ್ಳೆಯದನ್ನೇ ಹುಡುಕಬೇಕು. (ಶ್ರೀ ರಾಮಕೃಷ್ಣ ಪರಮ ಹಂಸ)

ಶಾಂತಿ ಬೇಕಾದರೆ, ಸುಖ ಬೇಕಾದರೆ, ಇತರರಲ್ಲಿ ಇರುವ ತಪ್ಪನ್ನು ಹುಡುಕದೆ, ತನ್ನ ದೋಷಗಳನ್ನು ತಿದ್ದಿಕೊಳ್ಳಬೇಕು. ಎಲ್ಲರೂ ನಮ್ಮ

ವರೇ, ಯಾರೂ ಪರಕೀಯರಲ್ಲ. (ಶ್ರೀ ಶಾರದಾದೇವಿ)

"ಎದ್ದೇಳು ಎಚ್ಚರಗೊಳ್ಳು, ಗುರಿಮುಟ್ಟದೆ ನಿಲ್ಲಬೇಡ, ಸ್ವಾಮಿ ವಿವೇಕಾನಂದರು ಒಂದು ಶತಮಾನದ ಹಿಂದೆ ಜಡ ಭಾರತೀಯರನ್ನು ಜಾಗರೂಕಗೊಳಿಸಲು, ಉಚ್ಛರಿಸಿದ ಎಚ್ಚರಿಕೆಯು ವಿಶ್ವ ವಿಖ್ಯಾತ ಸೂತ್ರ ಇಂದಿಗೂ ಅನ್ವಯಿಸುತ್ತಲಿವೆ. ಭಾರತೀಯರನ್ನು ಗಾಢನಿದ್ರೆಯಿಂದ ಎಬ್ಬೆಳಿಸಿ ಕಾರ್ಯತತ್ಪರರನ್ನಾಗಿ ಮಾಡಿ, ಜಾಗರೂಕತೆಯನ್ನು ಮೂಡಿಸುವ ಅವಶ್ಯಕತೆ, ಸ್ವಾತಂತ್ರ್ಯ ಭಾರತದಲ್ಲಿ ಹೆಚ್ಚಾಗಿದೆ. ಸ್ವತಂತ್ರ ನಮ್ಮನ್ನು ಹೆಚ್ಚಿನ ಜಡತೆಗೆ ನೂಕಿವೆ. ಮೈಗಳ್ಳತನದಿಂದ ಕೆಲಸಕ್ಕೆ ಬಗ್ಗದೆ, ನಮ್ಮ ಕಣೆಬರಹವೇ ಇಷ್ಟು ಎಂಬ ಮಿಥ್ಯಾ ತತ್ವಜ್ಞಾನವನ್ನು ಉದಾಹರಿಸಿ, ಜವಾಬ್ದಾರಿಯಿಂದ ಜಾರಿಕೊಂಡು ನಂಬಿದವರನ್ನು ಬಡತನದ ಬೇಗೆಗೆ ತಳ್ಳುವುದು ಸಾಮಾನ್ಯ ಊಟ,ನಿದ್ದೆ ಓಡಾಟ ಬಂಡಿ ಓಡಿಸುವಿಕೆ, ಪೂಜೆ, ಧ್ಯಾನ, ಸಂಭಾಷಣೆ, ಪ್ರತೀ ಕಾರ್ಯವನ್ನು ಪ್ರಜ್ಞೆ ಇಲ್ಲದೆ ಅಜಾಗರೂಕತೆಯಿಂದಲೇ ಮಾಡುತ್ತಿದ್ದೇವೆ ಅದರಿಂದಲೇ ನಾವು ಮುಟ್ಟದ್ದೆಲ್ಲ ಅಪೂರ್ಣ ಮತ್ತು ನ್ಯೂನತೆಗಳಿಂದ ತುಂಬಿದೆ. ಪರರ ಕರ್ತವ್ಯ ಲೋಪಗಳನ್ನು ಕಣ್ಣಿಟ್ಟು ನೋಡುತ್ತೇವೆ. ನಮ್ಮ ಉಗ್ರ ಅಲಕ್ಷ್ಯಗಳನ್ನು ಗಮನಿಸುವುದೇ ಇಲ್ಲ ಸಂಸ್ಕಾರಗಳು ತಮ್ಮ ಅರ್ಧಕ್ಕಿಂತ ಅವಧಿಯನ್ನು, ಹಿಂದಿನವರು ಮಾಡಿದ ಅಪರಾಧಗಳನು ಗುರುತಿಸುವುದರಲ್ಲೇ ಕಳೆಯುತ್ತಾರೆ. ಜರಿಯುವುದನ್ನು ಮತ್ತು ಜವಾಬ್ದಾರಿಗಳಿಂದ ಜಾರಿಕೊಳ್ಳುವುದನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದಾರೆ

ಸ್ವಾಮೀಜಿಯವರ ಎಚ್ಚರಗೊಳ್ಳಿ ಎಂಬ ಪದಕ್ಕೆ ಬಹು ವಿಶಾಲವಾದ ಭಾವವಿದೆ. ಪ್ರಜ್ಞೆ ಎಂಬುದು ಮಾನವನಿಗೆ ದೈವ ವಿಶೇಷ ಕೊಡುಗೆ. ಮಾಡುವ ಕೆಲಸಗಳನ್ನು ಎಚ್ಚರಿಕೆಯಿಂದ ಪ್ರಾಮಾಣಿಕತೆಯಿಂದ ಪೂರ್ಣ ಪ್ರಜ್ಞೆಯಿಂದ ಮಾಡಿದಾಗ ಮಾತ್ರ, ಅವು ಶ್ರೇಷ್ಠ ಕಾರ್ಯಗಳಾಗಿ ಹೊರ ಬೀಳುತ್ತವೆ. ಪೂರ್ಣ ಪ್ರಜ್ಞಾವಂತರೇ ವಿಶ್ವದ ಪರಸ್ಪರ ಸಂಬಂಧವನ್ನು ಗ್ರಹಿಸಲು ಅರ್ಹರು. ಪ್ರಜ್ಞೆಯು ಕಾರ್ಯಗಳು ವರ್ತ

ಮಾನ ಕಾಲದಲ್ಲಿ ನೆಲಸಿವೆ. ಅರಿಪ್ರಜ್ಞೆಯು ಭೂತ-ಭವಿಷ್ಯದ ಸ್ವಪ್ನ ಸಾಮ್ರಾಜ್ಯದಲ್ಲಿ ತೇಲಾಡುತ್ತವೆ.

ಶ್ರೇಷ್ಠ ಪುರುಷ ಅಥವಾ ಅವತಾರ ಪುರುಷ ಅಥವಾ ಮಹಾತ್ಮನಾಗುವುದು ಪ್ರತೀ ಮಾನವನ ಅಜನ್ಮ ಹಕ್ಕು. ಹುಟ್ಟಿದವರೆಲ್ಲಾ ಈ ಸ್ಥಿತಿಗೇರಬೇಕೆಂಬುದೇ ಪ್ರಕೃತಿಯ ನಿಯಮ. ಸ್ವತಂತ್ರ ಮನಸ್ಸು ಹೊಂದಿರುವ ಮಾನವನ ಇಚ್ಛೆಗೆ ಇದು ಬಿಟ್ಟಿದೆ. ಶಿಲೆಯಂತೆ ನಿಷ್ಕ್ರಿಯನಾಗಿ ನಿಶ್ಚಲವಾಗಿರಬಹುದು. ಆವೇಶಪರನಾಗಿ ತಿಂದು, ಗಿಡ ಮರಗಳಂತೆ ಬೆಳೆಯ.ಬಹುದು ಅಥವಾ ಸ್ವೇಚ್ಛಾಚಾರಿಯಾಗಿ, ತಾರತಮ್ಯ ಜ್ಞಾನವಿಲ್ಲದೆ, ಬುದ್ಧಿಪೂರ್ವಕವಾಗಿ ಪ್ರಾಣಿಗಳಂತೆ, ಲೋಲುಪನಾಗಿ ಯಾವ ಗುರುತೂ ಇಲ್ಲದೆ ಕೊನೆ ಉಸಿರೆಳೆಯಬಹುದು ಅಥವಾ ಸತತ ಸಾಧನೆಯಿಂದ ಮಹಾತ್ಮರ ಮಾರ್ಗವನ್ನನುಸರಿಸಿ, ವಿಕಾಸಿತನಾಗಿ ವಿಶ್ವವ್ಯಕ್ತಿಯಾಗಬಹುದು. ಪೂಜ್ಯತೆ ಅಥವಾ ದೈವತ್ವಕ್ಕೇರಿ ಇತಿಹಾಸ ಕಲ್ಪಿಸಬಹುದು. ಪಾಪ ಪುಣ್ಯಗಳ ಅರಿವು ಮಾಯವಾಗಿರುವುದರಿಂದಲೇ ಈ ಹೊತ್ತಿನ ಪ್ರಪಂಚ ಊಹಿಸಲಾರದ ದುರವಸ್ಥೆಯಲ್ಲಿ ಕೊಳಲುತ್ತಿರುವುದು. ಜಗತ್ತಿನ ಮಾನವ ಕೋಟಿ ದೈವೀಗುಣ ಸಂಪನ್ನರಾದರೆ ಈ ಭೂಮಿ ಸ್ವರ್ಗವಾದೀತು.

## ಸುಗುಣ ನಡತೆಯೇ ದೈವತ್ವಕ್ಕೆ ದಾರಿ

ಪ್ರತೀಯೊಂದು ಕಾರ್ಯವೂ ಮನಸ್ಸಿನ ಮೇಲೆ ಅಳಿಸಲಾರದ ಅಚ್ಚೊತ್ತುತ್ತದೆ ಇವುಗಳ ಸಂಕಲನವೇ ನಮ್ಮ ನಡತೆ ವ್ಯಕ್ತಿಯಿಂದ ವ್ಯಕ್ತಿಗೆ ಇರುವ ವ್ಯತ್ಯಾಸ, ಈ ನಡತೆಯ ನಿಗದಿಯಿಂದ ಅಂತಸ್ತು, ಹಣ, ಜಾತಿ, ಕುಲ, ವಂಶ ಇವುಗಳೊಂದೂ ಲೆಕ್ಕಕ್ಕೆ ಬಾರವು ಗೀತೆಯ ಚರಮ ಶ್ಲೋಕದಲ್ಲಿ ಇದೇ ಭಾವನೆಯನ್ನು ವ್ಯಾಸರು ಅರ್ಥಪೂರ್ಣವಾಗಿ ಜೋಡಿಸಿದ್ದಾರೆ.

'ಎಲ್ಲಿ ಯೋಗೇಶ್ವರನಾದ ಕೃಷ್ಣನಿರುವನೋ
ಎಲ್ಲಿ ಧನುರ್ಧಾರಿಯಾದ ಪಾರ್ಥನಿರುವನೋ
ಅಲ್ಲಿ ನಿತ್ಯವೂ ನೀತಿ ಸಂಪತ್ತು ಏಳಿಗೆ
ನೆಲಸಿರುವುದೆಂದು ನನ್ನ ಮತ"

ದೈವಜ್ಞಾನದಿಂದ ಏಳಿಗೆ ಎಂಬ ಸಾರಾಂಶ. ನೀತಿ ಇದ್ದಲ್ಲಿ ಮಾತ್ರ ವಿಜಯ, ನೀತಿ ಮತ್ತು ವಿಜಯ ಎರಡೂ ಇದ್ದಲ್ಲಿ ಯಶಸ್ಸು, ಇವು ಮೂರು ಇರುವಲ್ಲಿ ಸಂಪತ್ತು ಹಿಂಬಾಲಿಸುತ್ತದೆ.

ನೀತಿರಹಿತ ರಾಷ್ಟ್ರಕ್ಕೆ ಪುರೋವೃದ್ಧಿ ಇಲ್ಲ. ವ್ಯಕ್ತಿಗೂ ಅಷ್ಟೆ. ಯಾರು ನೀತಿವಂತನೋ ಅವನು ಕೀರ್ತಿಗಳಿಸುತ್ತಾನೆ. ಅಂಥವನನ್ನು ಯಶಸ್ಸು ಹುಡುಕಿಕೊಂಡು ಬರುತ್ತದೆ. ಅದಕ್ಕಿಂತ ಹೆಚ್ಚಾಗಿ, ಎಲ್ಲಕ್ಕಿಂತ ಶ್ರೇಷ್ಠ ಸಂಪತ್ತಾದ ಶಾಂತಿ ಅವನ ಹಕ್ಕು. ಸಮೃದ್ಧ ಜೀವನ ಕಟ್ಟಿಟ್ಟ ಬುತ್ತಿ.

ಈ ವೇದ ಭೂಮಿಯಲ್ಲಿ ಆದಿಯಿಂದಲೂ ಶೀಲಕ್ಕೆ ವಿಶೇಷ ಪ್ರಾಮುಖ್ಯತೆ ಮತ್ತು ಮಾನ್ಯತೆ ಇದೆ. ಸಜ್ಜನರ ಸುಗುಣದ ಸುಗಂಧ, ಸ್ವರ್ಗಕ್ಕೂ ಪಸರಿಸುವುದು ಎಂದು ಬುದ್ಧ ಹೇಳಿದರು. ಎಲ್ಲಾ ಮತದ ಧರ್ಮ ಗ್ರಂಥಗಳೂ ದೇವರನ್ನು ಮುಂದಿಟ್ಟುಕೊಂಡು, ಅವನ ಹೆಸರಿನಲ್ಲಿ, ಮಾನವ ಕುಲ ಉದ್ಧಾರಕ್ಕೆ ಸತ್ಯ ಧರ್ಮ, ನೀತಿಗಳನ್ನು ಬೋಧಿಸಿವೆ. ಉಪನಿಷತ್ತು, ಭಗವದ್ಗೀತೆ, ರಾಮಾಯಣ, ಮಹಾಭಾರತ ಭಾಗವತ, ಮನುಸ್ಮೃತಿ, ತಿರುಕುರಲ್, ಶುಕನೀತಿ, ಶುಕ್ರನೀತಿ, ನೀತಿ ಶತಕ, ಸರ್ವಜ್ಞ, ಬೈಬಲ್, ಖುರಾನ್ ಅಲ್ಲದೆ ಗುರುನಾನಕ್, ರಾಮ ಕೃಷ್ಣ ಪರಮ ಹಂಸ, ಶ್ರೀ ಶಾರದಾ ದೇವಿ, ಸ್ವಾಮಿ ವಿವೇಕಾನಂದ ರವೀಂದ್ರನಾಥ ಠಾಗೂರರು, ಮಹಾತ್ಮ ಗಾಂಧೀಜಿ, ಬಸವಣ್ಣ, ಬುದ್ಧ ದೇವ, ಮಹಾವೀರ, ಲೊಟ್ಸೆ, ಕಾನ್ ಫುಕಿಯಸ್, ಸೋಕ್ರೇಟಸ್ ಮುಂತಾದ ಮಹಾತ್ಮರು ಜನರನ್ನು ನೀತಿಮಾರ್ಗದಲ್ಲಿ ನಡೆಸಲು ಜೀವ ಮಾನಗಳನ್ನೇ ಕಳೆದರು. ಸುಗುಣವೇ ಮಾನವರಲ್ಲಿರುವ ದೈವತ್ವ. ಸುಗುಣರನ್ನು ಹುಚ್ಚರು ವಿನಃ ಸರ್ವರೂ ಗೌರವಿಸುತ್ತಾರೆ. ಅವರ

ಬೆಲೆ ಎಂದೂ ತಗ್ಗದು. ಸುಗುಣ-ಸೌಂದರ್ಯ, ಕಳೆ, ತೇಜಸ್ಸುಗಳನ್ನು ಬೀರುವ ಶ್ರೇಷ್ಠ ಶಕ್ತಿ. ಸುಗುಣ ಶ್ರೇಯಸ್ಕರ, ಶೋಭದಾಯಕ ಮತ್ತು ಶ್ಲಾಘ್ಯದಾಯಕ. ಸುಗುಣರೇ ಸಮಾಜದ ಸಂರಕ್ಷಕರು ಮತ್ತು ಶಿಕ್ಷಕರು. ಇವರೇ ರಾಷ್ಟ್ರದ ಬೆನ್ನೆಲುಬು, ರಾಷ್ಟ್ರದ ಮತ್ತು ಅಂತರ ರಾಷ್ಟ್ರದ ಶಾಂತಿ ಪಾಲಕರು. ಈ ಸುಸಂಸ್ಕೃತರೇ, ಪೂರ್ಣ ರಾಷ್ಟ್ರ ಜೀವನದ ಶೈಲಿ, ವಿಶಿಷ್ಠತೆ ಮತ್ತು ಸೌಂದರ್ಯಗಳ ವರ್ಧಕರು. ಇವರೇ ಸಮಾಜದ ಎಲ್ಲಾ ಮಟ್ಟಗಳಲ್ಲೂ ಇರುವ ಶೋಷಣೆಗಳನ್ನು ಪ್ರತಿಭಟಿಸಿ ಮಹಾ ಉಪಕಾರಗಳನ್ನೆಸಗಿ, ರಾಷ್ಟ್ರದ ಭವಿಷ್ಯವನ್ನು ರೂಪಿಸಬಲ್ಲ ಶಕ್ತರು. ರಾಜಕೀಯ, ಸಾಮಾಜಿಕ, ಆರ್ಥಿಕ, ವೈಜ್ಞಾನಿಕ ಮತ್ತು ಆಧ್ಯಾತ್ಮಿಕ ಕ್ಷೇತ್ರಗಳನ್ನು ಸಮೀಕರಿಸಿ ಸಮಗ್ರತೆಯನ್ನು ಸಮರ್ಪಿಸಬಲ್ಲ ಸಮರ್ಥರು. ಈ ನಿಸ್ವಾರ್ಥಿಗಳು ಸ್ವಸ್ಥ ಸಮಾಜ ರಚನೆಗೆ ಅವಶ್ಯಕವಾದ ಆದರ್ಶ, ಕಲ್ಪನೆ, ರೂಪುರೇಖೆ ಮತ್ತು ಕಾರ್ಯಾಚರಣೆಗಳ ರೂವಾರಿಗಳು. ದಾರಿದ್ರ್ಯತೆಯ ಯಾತನೆ, ಅನಾರೋಗ್ಯದ ನೋವು, ಅವಿದ್ಯೆಯ ಕೀಳುತನ, ಅತ್ಯಾಸಕ್ತರ ಅಜ್ಞಾನ ಮುಂತಾದ ಪೀಡೆಗಳನ್ನು ಕ್ರಮೇಣ ಕಡಿಮೆ ಮಾಡಿ, ಸಂಪೂರ್ಣವಾಗಿ ನಿರ್ಮೂಲ ಮಾಡುವ ನಿಪುಣ ನಿರ್ವಾಹಕರು. ಇಂಥ ಪುಣ್ಯಾತ್ಮರನ್ನು ವಿಪುಲ ಸಂಖ್ಯೆಯಲ್ಲಿ ಪಡೆದಿರುವ ರಾಷ್ಟ್ರ, ವಿಶ್ವದ ಕಿರೀಟ. ನಾನಾ ಹೆಸರುಗಳಿಂದ ಮನುಷ್ಯನಿಂದ ಮನುಷ್ಯನನ್ನು ವಿಭಾಗಿಸಿರುವ, ಇಂದಿನ ಕಲುಷಿತ, ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ವಾತಾವರಣ ಇಂಥ ಅನೇಕ ಅವತಾರ ಪುರುಷರ ಉದಯವನ್ನು ಕಾತುರತೆಯಿಂದ ಕಾಯುತ್ತಿದೆ.

"ಒಳ್ಳೆಯ ನಡತೆಯವರಿಗೆ ಅಭ್ಯುದಯವಿಲ್ಲ" ಎಂಬ ತಪ್ಪು ಕಲ್ಪನೆ ಇದೆ. ಆದರೆ ಮಹಾಭಾರತದ "ಸತ್ಯಂಜಯತು" ಎಂಬ ಆಧ್ಯಾತ್ಮಿಕ ಅನುಭವದ ಘೋಷಣೆ ತಪ್ಪಾಗಲು ಸಾಧ್ಯವಿಲ್ಲ. ಸುಕಾರ್ಯಗಳನ್ನು ಎಸಗುವವನು ದುಃಖಕ್ಕೆ ಖಂಡಿತ ಈಡಾಗನು. ಕಷ್ಟಗಳು ಸತ್ಪುರುಷನನ್ನು ಪೂರ್ಣತ್ತಿಗೊಳಿಸುವ ವಿಧಾನ. ದುಷ್ಟನ ತಾತ್ಕಾಲಿಕ ಜಯ, ಸುಖಗಳೆಲ್ಲ ಸಂಕೋಲೆಗಳು. ಕ್ರೈಸ್ತ, ಸಾಕ್ರೆಟೀಸ್ ಗಾಂಧೀಜಿ ಮುಂತಾದ ಮಹಾತ್ಮರು ದುರ್ಮರಣಕ್ಕೆ ತುತ್ತಾಗಿ, ಯುಗ ಯುಗಾಂತರಗಳ ಆರಾಧನಾರ್ಹರಾಗಿದ್ದಾರೆ.

# ಆತ್ಮ ಕಥೆ

ಬದುಕಿನ ಬಣ್ಣನೆಯಾಗದೆ, ಓದುಗರಿಗೆ ಗ್ರಂಥಕರ್ತನ ಹಿನ್ನಲೆಯಿಂದ ಉಪಯೋಗವಾಗಬಹುದೆಂಬ ಸದುದ್ದೇಶದಿಂದ ಸಂಧಿಯಲ್ಲಿ ಸಂಕ್ಷಿಪ್ತವಾಗಿ ಆತ್ಮ ಕಥನ ಬರೆದಿದೆ  ಗ್ರಾಮೀಣರಾದರೂ, ಸುಸಂಸ್ಕೃತರು, ಈಶ್ವರ ಶ್ರದ್ಧಾಭಕ್ತರಾದ ತಾಯಿ-ತಂದೆ ಮತ್ತು ವಿದ್ಯಾಗುರುಗಳ ಕಟ್ಟುಪ್ಪಣೆಯಲ್ಲಿ ಬಾಲ್ಯ ಕಳೆಯಿತು.  ಪಾಪಿಗಳನ್ನು ದೇವರು ಕ್ರೂರವಾಗಿ ಶಿಕ್ಷಿಸದೆ ಬಿಡನು ಎಂಬ ಭಯ ಬಲವಾಗಿತ್ತು.  ವೀರಭದ್ರಸ್ವಾಮಿಗೆ ಹೂ ಹೊಡ್ಡಿ ಅಪ್ಪಣೆ ಪಡೆಯದೆ, ವರಕನ್ಯೆ ನಿಶ್ಚಯ, ದೂರ ಪ್ರಯಾಣ, ಹೊಸ ಬೆಳೆ ಇಡುವುದು, ಆಸ್ತಿ ಕೊಡುವುದು, ಕೊಳ್ಳುವುದು, ವಿದ್ಯಾಭ್ಯಾಸ ಪ್ರಾರಂಭ, ಯಾವ ವ್ಯವಹಾರವೂ ನಡೆಯುತ್ತಿರಲಿಲ್ಲ  ಪುರೋಹಿತರು ನಿಶ್ಚಯಿಸಿದ ಸಮಯವಲ್ಲದೆ ಕಾರ್ಯಗಳು ನಡೆಯುತ್ತಿರಲಿಲ್ಲ. ಶಕುನಗಳಿಗೆ ಕೊನೆ ಮೊದಲಿರಲಿಲ್ಲ.  ಹರಿಕಥೆ, ಉಪವಾಸ, ಹರಿಕೆ ಸಲ್ಲಿಸುವುದು, ಉರಿಯುವ ಕೆಂಡದ ಕೊಂಡಕ್ಕೆ ನುಗ್ಗುವುದು, 20-25 ಗಾಡಿಗಳಲ್ಲಿ ಒಗ್ಗಟ್ಟಿನ ಯಾತ್ರೆ, ಪಾದಪೂಜೆ, ಶಿವರಾತ್ರಿಯ ಜಾಗರಣೆ ಮತ್ತು ಉಪವಾಸ ಇವೆಲ್ಲ ಶ್ರದ್ಧಾಭಕ್ತಿಯಿಂದ ನಡೆಸಲ್ಪಡುತ್ತಿದ್ದವು.

ಮಳೆರಾಯನನ್ನು ಒಲಿಸಿಕೊಳ್ಳಲು ಒಗ್ಗಟ್ಟಿನ ಪರ, ಸಂತರ್ಪಣೆ ಹಲವಾರು ಕುರಿ ಮೇಕೆಗಳ ಬಲಿ ಈಗಲೂ ನಡೆಯುತ್ತಿದೆ.  ತಂದೆ-ತಾಯಿಗಳು ಅಪ್ಪಟ ಸಸ್ಯಾಹಾರಿಗಳಾದರೂ, ಮಾಂಸಾಹಾರಿಗಳಿಗೆ ಅಣಿ ಮಾಡಿಕೊಡುತ್ತಿದ್ದರು.  ಬಡ-ಬಗ್ಗರಿಗೆ ಹೊಟ್ಟೆ ತುಂಬಿಸುವುದೇ ಪರದ ಉದ್ದೇಶ್ಯ.  ಇದೊಂದು ಅತಿ ಶ್ರೇಷ್ಠ ಕಾರ್ಯ.  ಹಿರಿಯರ ವಿಶಿಷ್ಟ ಗುಣವೆಂದರೆ ನಿರ್ಗತಿಕರ ಸಂತೈಕೆಗಾಗಿ ಸಂದರ್ಭಗಳನ್ನು ಕಲ್ಪಿಸಿಕೊಂಡು ಹಸಿವನ್ನು ತುಷ್ಟಿಪಡಿಸಿ, ಸಂತೋಷ ಪಡಿಸಿ ನಲಿಯುವುದು  ಅನೇಕ ಸಾರಿ ಮಳೆರಾಯ ಪ್ರಾರ್ಥನೆಗೆ ಓಗೊಟ್ಟಿದ್ದಾನೆ.

ಪ್ರತೀ ಪೂಜೆ, ಸಂಕಷ್ಟದವರ ಸಂತುಷ್ಟಿಗಾಗಿ ನಡೆಸುವ ಯಾಗ. ದರಿದ್ರ ನಾರಾಯಣನ ತೃಪ್ತಿಯೇ ಶ್ರೇಷ್ಠ ಪ್ರಾರ್ಥನೆ.  ದಾನ ಮತ್ತು ತ್ಯಾಗ

ವಿಲ್ಲದ ಪೂಜೆ ಅಪರೂಪ. ಆಹಾರ ಹಂಚಿಕೆ ಇಲ್ಲದ ಆರಾಧನೆ ಅಪೂರ್ವ. ಮನೆಗೆ ಸೇರಿದ ಪಡಶಾಲೆ (ಜಗುಲಿ, ಮೊಗಸಾಲೆ) ಎಂಬ ಜಾಗ ಒಂದು ತರದಲ್ಲಿ ಸಾರ್ವಜನಿಕರಿಗೆ ಸೇರಿದ್ದು. ಇದು ಪ್ರಯಾಣಿಕರು ತಂಗುವ ತಾಣ ಮತ್ತು ಯಾಗ ಶಾಲೆ. ಬೀಸುವುದು, ಕುಟ್ಟುವುದು ಇವೆಲ್ಲ ಕೈಯಲ್ಲೇ ನಡೆಯುತ್ತಿದ್ದ ಕಾಲವಾದರೂ, ಪಡಸಾಲೆಗೆ ಬಂದಿರುವ ಅಪರಿಚಿತರೂ, ಅನೀರೀಕ್ಷಿತರೂ ಆದ ಅತಿಥಿಗಳು ಉಣ್ಣದೇ ಬೀದಿ ಬಾಗಿಲನ್ನು ಮುಚ್ಚುತ್ತಿರಲಿಲ್ಲ. ಈ ಪದ್ಧತಿ ಪ್ರತಿಯೊಂದು ಊರಿನಲ್ಲು ಅನುಕೂಲಸ್ಥರ ಮನೆಯಲ್ಲಿ ನಡೆಯುತ್ತಿದ್ದ ಕರುಣೆಯ ಕಾರ್ಯ. ಹಸಿವೆಯಿಂದ ಯಾರು ನರಳಬಾರದು ಎಂಬುದೇ ಅಂದಿನ ಸಮಾಜದ ಶ್ರೇಷ್ಠ ಗುಣ. ಅಗಸ, ಹಜಾಮ, ಆಚಾರಿ, ತೋಟಿ, ತಳವಾರ, ಕೋಲುಕಾರ ಬಳೆಗಾರ, ನೀರುಗಂಟಿ - ಎಲ್ಲರಿಗೂ ವರ್ಷಪೂರ್ತಿ ಹೊಟ್ಟೆಗಿರುವ ಸುವ್ಯವಸ್ಥೆ ಇತ್ತು. ವಿಧವೆಯರ, ಅಂಗವಿಕಲರ, ಆಯೋಗ್ಯ ನೆಂಟರಿಷ್ಟರ ಸಾಗುವಳಿಯನ್ನು ಕೂಡ ಊರಿನವರೆಲ್ಲ ಸೇರಿ ಮಾಡುತ್ತಿದ್ದ ಕಾಲ. ಅನುಕೂಲಸ್ಥರ ಗುಳಿ ರಾಗಿಯನ್ನು ನಷ್ಟ ಹೊಂದಿದ ರೈತರು ಬಳಸಿಕೊಂಡು ಅದನ್ನು ಅವರು ಬೆಳೆದಾಗ ಭರ್ತಿ ಮಾಡುತ್ತಿದ್ದರು. ಈ ಕರ್ಮಯೋಗಿಯ ಕರುಣೆ, ಮೂಕ ಜೀವ ಕೋಟಿಗೂ ವಿಸ್ತರಿಸಲ್ಪಟ್ಟಿದೆ. ಸರ್ವಜೀವಿಯ ಕ್ಷೇಮಾಪೇಕ್ಷೆಯ ಈ ಮಹಾಪ್ರಾಜ್ಞನಿಗೆ, ಸಮಾಜ, ಸರ್ಕಾರ ಸಲ್ಲಿಸಿರುವ ಸನ್ಮಾನ ಏನು ? ತಿರಸ್ಕಾರ-ತಾತ್ಸಾರ. ಅಪರಿಮಿತ ಸಂಖ್ಯಾಬಲದ ಗ್ರಾಮೀಣರಿಗೆ ಪ್ರಜಾಪ್ರಭುತ್ವ ಕೊಟ್ಟಿರುವ ಪ್ರಾಮುಖ್ಯತೆ ಏನು ? ನಾಲ್ಕಾರು ದಶಕಗಳು ದಾಟಿದರೂ ಸಾಮಾನ್ಯ ಸೌಲಭ್ಯಗಳ ತೀವ್ರ ಅಭಾವ ಸಂಸಾರದ ಸದಸ್ಯರೆಲ್ಲ, ಹಗಲಿರುಳೂ, ಬಿಸಿಲು ಚಳಿ ಎನ್ನದೆ ಎಳೆಯರು, ವೃದ್ಧರು ಎಂಬ ದಯಾದಾಕ್ಷಿಣ್ಯವಿಲ್ಲದೆ ವರ್ಷಪೂರ್ಣ ದೇಹ ಸವೆಸಿದರೂ, ಹೊಟ್ಟೆಗಿದ್ದರೆ ಬಟ್ಟೆಗಿಲ್ಲ. ಅವನ ಶ್ರಮಕ್ಕೆ ತಕ್ಕಂತ ಸಂಪಾದನೆ ತಪ್ಪಿಸಲು, ನೇರವಾಗಿಯೋ, ಪರೋಕ್ಷವಾಗಿಯೋ ಸರ್ವರೂ, ಸರ್ವಕಾಲದಲ್ಲೂ ಸಂಚು ನಡೆಸುತ್ತಿದ್ದಾರೆ. ಬಿಕ್ಷುಕರನನ್ನಾಗಿ ಮಾಡಿ ಅವನ ಆತ್ಮಗೌರವ ಹರಣ ಮಾಡಿದ್ದಾರೆ ರಾಜಕೀಯಸ್ಥರು ಕಪಟ ಕಂಬನಿ ಹರಿಸುವುದರಲ್ಲಿ ಮತ್ತು ಹುಸಿ ಮರುಕ ಪ್ರದರ್ಶ

ಸುವುದರಲ್ಲಿ ಪ್ರೈಪ್ರೋಟೆಯ ಪ್ರವೀಣತೆ ಗಳಿಸಿದ್ದಾರೆ. ಸ್ಥಿರ ಸಮತೆಯ ಸಂಸ್ಥಾಪನೆಗೆ ಸಿದ್ಧಪುರುಷ ಶ್ರೀಪ್ರರ ಆಗಮನಕ್ಕಾಗಿ ಭಾರತ ಕಾಯುತ್ತಿದೆ

ಹಳ್ಳಿಗಳಲ್ಲಿ ಗುಂಪುಗಾರಿಕೆ ಸಾಮಾನ್ಯ. ಈ ಚಾಳಿ, ಚುನಾವಣೆ ಗಳಿಂದಾಗಿ ಹೆಮ್ಮರವಾಗಿದೆ. ರಾಜಕೀಯ ನಾಯಕರುಗಳಿಗೆ ಈ ಅನಿಷ್ಟ ಇಷ್ಟ. ಚಿಕ್ಕಂದಿನಲ್ಲಿ ಗುಂಪುಗಳ ಬೇಧವಿಲ್ಲದೆ ಬೆರೆಯುತ್ತಿದ್ದೆ ತಂದೆ ಇದನ್ನು ಬೇಡವೆನ್ನಲಿಲ್ಲ, ಬೇಸರ ಪಡಲಿಲ್ಲ.

ಶ್ರೇಷ್ಠ ಗಾಂಧಿವಾದಿ ಮತ್ತು ಶಿಸ್ತಿಗೆ ಹೆಸರಾದ ಉಪಾಧ್ಯಾಯರ ಪೋಷ ಣೆಯಲ್ಲಿ ಮಾಧ್ಯಮ ಶಾಲೆಯ ವಿದ್ಯಾಭ್ಯಾಸ ಮುಗಿಯಿತು. ಹೈಸ್ಕೂಲು ಕಾಲೇಜು ವಿದ್ಯಾಭ್ಯಾಸಕ್ಕಾಗಿ, ಬೆಂಗಳೂರು ವಿದ್ಯಾರ್ಥಿ ನಿಲಯದಲ್ಲಿ ಸ್ವತಂತ್ರ ಜೀವನ ಮತ್ತು ನೈತಿಕ ಬೋಧನೆಗಳ ಅಭಾವದಿಂದ, ತಾರುಣ್ಯ ಕಳೆಯಿತು. ಇದು 1932ರಿಂದ 1942ರ ಸಮಯ. ಸ್ವಾತಂತ್ರ್ಯ ಸಮರದ ಸನ್ನಿವೇಶ. ಮಹಾತ್ಮ ಗಾಂಧಿಯವರ ನೇತೃತ್ವದಲ್ಲಿ ಇಡೀ ರಾಷ್ಟ್ರವೇ ದೇಶಪ್ರೇಮದಿಂದ ಮೈದುಂಬಿ ಮುನ್ನುಗ್ಗುತ್ತಿದ್ದ ಮಹಾ ಕಾಲ. ಸತ್ಯ, ಧರ್ಮ, ನೀತಿ, ಸರಳತೆ, ಅಹಿಂಸೆ ಮುಂತಾದ ಉಚ್ಚ ನೈತಿಕ ನೆಲೆಗಟ್ಟುಗಳ ಬೋಧನೆ ಎಲ್ಲೆಲ್ಲೂ ಕೇಳುತ್ತಿತ್ತು. ದೇಶಪ್ರೇಮ ಸಹೋದರತ್ವ, ತ್ಯಾಗ, ಸೇವೆ, ಐಕ್ಯತೆ, ಶಾಂತಿ, ಸಹಬಾಳ್ವೆ, ಕೋಮು- ಸೌಹಾರ್ದತೆ, ಸಮಾನತೆ, ಮಾನವೀಯತೆಗಳ ಪ್ರಚಾರ ಪ್ರಬಲವಾಗಿತ್ತು ಭಾರತವನ್ನು ಆತ್ಮೀಯತೆಯಿಂದ ಭರತ ವರ್ಷ, ಭಾರತಮಾತ, ದಿವ್ಯ ಮಾತೆ, ಧರ್ಮ ಭೂಮಿ, ಪುಣ್ಯ ಭೂಮಿ ಎಂದು ಒಕ್ಕೊರಳಿನ ಜೈ ಘೋಷಗಳು ಗಗನಕ್ಕೇರಿ ಆನಂದ ಭಾಷ್ಪಗಳನ್ನು ತಂದು ಸರ್ವರಲ್ಲೂ ಉತ್ಸಾಹ ತುಂಬುತ್ತಿತ್ತು. ಭಾರತೀಯರು, ಹಿಂದು, ಮುಸಲ್ಮಾನ ಸಿಕ್ಕರೆಲ್ಲ ನನ್ನ ಸಹೋದರರು. ಅವರೆಲ್ಲರ ಶ್ರೇಯಸ್ಸು ನನ್ನ ಶ್ರೇಯಸ್ಸು ಎಂಬ ಭಾವನೆ ಸಾರ್ವಜನಿಕವಾಗಿತ್ತು. ಇಡೀ ರಾಷ್ಟ್ರವೇ ಒಂದಾಗಿ ದಿಟ್ಟ ನಿರ್ಧಾರದಿಂದ, ನಿರ್ಭಯವಾಗಿ ಮುನ್ನುಗ್ಗುತ್ತಿದ್ದ ಮಜಲು. ಗಾಂಧೀಜಿಯವರ ಬರವಣಿಗೆ, ಭಾಷಣ, ಸ್ವಂತ ಸರಳ ಸತ್ಯ ಜೀವನ

ಪ್ರಾಬಲ್ಯವಾದ ಪ್ರಭಾವದ ಮುದ್ರೆ ಒತ್ತುತ್ತಿತ್ತು. ಆ ಮಹಾತ್ಮನಿಂದ ಪ್ರಭಾವಿಸಲ್ಪಟ್ಟ ಸಾವಿರಾರು ವಿದ್ವತ್ತಿನ ವಿಭೂಷಣರು, ವಿವೇಕ ವಿವೇಚನೆಯ ಮತ್ತು ವಿಮರ್ಶಣೆಯ ವಿಭೂತಿ ಪುರುಷರು ಎಡೆಬಿಡದೆ ಪ್ರಚಾರ ಮಾಡುತ್ತಿದ್ದರು. ರಾಷ್ಟ್ರ ವಿಮುಕ್ತಿ ಮುಖ್ಯ ಗುರಿಯಾದರು, ಭಾರತೀಯರ ನೈತಿಕ ಮಟ್ಟವನ್ನು ಮೇಲೆತ್ತುವುದೇ ಮೆಟ್ಟಿಲುಗಳಾಗಿದ್ದವು. ಧರ್ಮವೇ ದೇವರೆಂಬ ದೃಢ ಶ್ರದ್ಧೆ ತುಂಬಿದ್ದ ಹಳ್ಳಿಯವರ ಮೇಲೆ, ಇದರ ಪರಿಣಾಮ ಅದ್ಭುತವಾಗಿತ್ತು.

ನನ್ನ ತಂದೆಯವರು ನೀತಿ, ಸತ್ಯಗಳ ಅಂಶಗಳನ್ನು ತಮ್ಮ ಮಕ್ಕಳ ಮೇಲೆ ಅಲ್ಲದೆ, ಸಹ ನಿವಾಸಿಗಳ ಮೇಲೆ ಅನೇಕ ರೂಪದಲ್ಲಿ ಒತ್ತಾಯಿಸುತ್ತಿದ್ದರು. ಅವರ ಪ್ರಕಾರ ಸಂಸಾರ, ಸಮಾಜ, ಹಳ್ಳಿ, ಜಾತಿ, ಕುಲ ಇವೆಲ್ಲ ಒಗ್ಗಟ್ಟಿನ ಸಂಕೇತಗಳು. ಈ ಒಗ್ಗಟ್ಟನ್ನು ಸಡಿಲ ಮಾಡಲು ಹೊರಗಿನ ಮತ್ತು ಒಳಗಿನ ದುಷ್ಟ ಶಕ್ತಿಗಳು ಪ್ರಯತ್ನ ಪಡುತ್ತಲೇ ಇರುತ್ತವೆ. ಆದರೆ ವಿವೇಕಿಗಳು ತಾವು ಪಡೆದಿರುವ ಉಪಕಾರ ಸ್ಮರಣೆ ಮಾಡಿಕೊಂಡು, ಐಕ್ಯತೆಯನ್ನು ಉಳಿಸಿಕೊಂಡು ಹೋಗಬೇಕು. ಪರಜಾತಿಯವರ ಗೌರವ, ಆದರಣೆ ಪಾಲಿಸುವುದು ಎಂದರೆ, ಉಳಿದ ಜಾತಿಗಳ ಸಹನೆಗಳಿಂದಲೇ ತನ್ನ ಜಾತಿಗೆ ಮಾನ್ಯತೆ ಸಾಧ್ಯ ಎಂದು, ಸ್ವಾರಸ್ಯವಾಗಿ ವಿವರಿಸುತ್ತಿದ್ದರು. ಸಂಸಾರದ ಸೌಹಾರ್ದತೆ, ಶಾಂತತೆ. ಅನ್ಯೋನ್ಯತೆ ಮತ್ತು ಸುಖ ಸೌಕರ್ಯಗಳಿಗೆ ಜಾತಿ ಕಟ್ಟಳೆಗಳ ಅನುಸರಣೆ ಅಗತ್ಯ ಎಂಬುದೇ ಅವರ ವಾದ ತಮ್ಮ ತಮ್ಮ ವಂಶದ ಮತ್ತು ಹಳ್ಳಿಯ ಹಿಂದಿನ ತಲೆಮಾರಿನ ಶ್ರೇಷ್ಠರನ್ನು ಕೃತಜ್ಞತೆಯಿಂದ ನೆನೆಯುತ್ತಿದ್ದರು. ಮನಸ್ಸಿಟ್ಟು ಪರಿಶೀಲಿಸಿದರೆ, ಒಳ್ಳೆ ನಡತೆಗೆ, ಸುಗುಣಕ್ಕೆ, ಧರ್ಮಕ್ಕೆ ಪ್ರಾಮುಖ್ಯತೆ ಕೊಟ್ಟು ಬಾಳಿದವರನ್ನು ಪ್ರತೀ ವಂಶದಲ್ಲೂ ಗುರುತಿಸಬಹುದು, ಎಂದು ಹೇಳುತ್ತಿದ್ದರು. ಜನ ಅಪವಾದಕ್ಕೆ ಅಂಜಿ ಮಾನ, ಮರ್ಯಾದೆಯ ಜೀವನ ನಡೆಸಿರುವವರನ್ನು ಉದಾಹರಣೆಗಳಾಗಿ ಉಲ್ಲೇಖಿಸುತ್ತಿದ್ದರು. ರಜಾ ದಿನಗಳಲ್ಲ ಸಂಪೂರ್ಣವಾಗಿ ಅವರ ಬಳಿಯೇ ಇರಬೇಕಾಗುತ್ತಿತ್ತು. ನಮ್ಮ ತಂದೆ ತಾಯಿಗೆ ಬ್ರಾಹ್ಮಣರು ಮತ್ತು

ಲಿಂಗಾಯಿತ ಗುರುಗಳಲ್ಲಿ ಸಮಶ್ರದ್ಧೆ ಇತ್ತು. ಅವರೆಲ್ಲರ ಸೇವೆ ಬಹಳ ಮಾಡುತ್ತಿದ್ದರು. ಗಾಂಧೀಜಿಯವರ ಪ್ರಭಾವದಿಂದ ಬೀದಿಯಲ್ಲೇ ಕೂಡುತ್ತಿದ್ದ ಹರಿಜನರಿಗೆ ಹಜಾರಕ್ಕೆ ಹೋಗಿ ಬರುವ ಹಕ್ಕು ಜಾರಿಗೆ ಬಂತು. ದುಶ್ಕೃತ್ಯಗಳಿಗೆ, ಹೆಂಡದ ಅಂಗಡಿಗಳಿಗೆ ಊರಿನಲ್ಲಿ ಅವಕಾಶ ಕೊಡುತ್ತಿರಲಿಲ್ಲ. ದಟ್ಟಅರಣ್ಯಗಳ ಪ್ರಕೃತಿ ಸೌಂದರ್ಯವೂ ಈ ಸುಗುಣಗನ್ನು ಪುಷ್ಟೀಕರಿಸುತ್ತಿತ್ತು.

ನಾನು ಸೂಕ್ಷ್ಮ ಬುದ್ಧಿಯ ವಿದ್ಯಾರ್ಥಿ ಅಲ್ಲದಿದ್ದರೂ, ವಿದ್ಯಾ-ಭ್ಯಾಸದಲ್ಲಿ ಆಸಕ್ತಿ, ಗುರು-ಹಿರಿಯರಲ್ಲಿ ಗೌರವ ಗಾಢವಾಗಿತ್ತು. ನಮ್ಮಲ್ಲಿ ಅನೇಕರು, ಸ್ವಾತಂತ್ರ್ಯ ಸಮರದಲ್ಲಿ ನೇರವಾಗಿ ಪರೋಕ್ಷವಾಗಿ ಪಾಲ್ಗೊಂಡೆವು. ಅನೇಕ ಸಾರಿ ಪೋಲೀಸ್ ಲಾಠಿಯ ಬಿಸಿ ರುಚಿ ಅನುಭವಿಸಿದ್ದೇವೆ. ಠಾಣೆಯ ಅತಿಥಿಗಳಾಗಿ ರಾತ್ರಿಯನ್ನು ಸೊಳ್ಳೆ ತಿಗಣೆ ಮತ್ತು ಬೈಗುಳ ತಿರಸ್ಕಾರಗಳನ್ನು ಸಹಿಸಿಕೊಂಡ ಅಂಶ ಅಚ್ಚಳಿಯದಂತೆ ಜ್ಞಾಪಕದಲ್ಲಿದೆ. ಸ್ವಾತಂತ್ರ್ಯೋತ್ತರದಲ್ಲಿ ನನ್ನ ಅನೇಕ ಮಿತ್ರರು ಚುನಾಯಿತ ಸ್ಥಾನಗಳನ್ನು ಗಳಿಸಿ, ರಾಷ್ಟ್ರದ ಆಗು-ಹೋಗುಗಳಲ್ಲಿ ಸಕ್ರಿಯ ಪಾತ್ರಿಗಳಾಗಿದ್ದಾರೆ. ಕೆಲವರು ಕೀರ್ತಿಯನ್ನು ಪಡೆದಿದ್ದಾರೆ.

1947ರಲ್ಲಿ ಸ್ವಾತಂತ್ರ್ಯ ಬಂತು. ಆ ವೇಳೆಗೆ ನನಗೆ ವಿವಾಹವೂ ಆಗಿತ್ತು. ತಂದೆಯವರ ಮನಸ್ಸಂತೃಪ್ತಿಗಾಗಿ ಅತೀ ಇಷ್ಟವಾದ ಮತ್ತು ಸ್ವತಂತ್ರದ ಮೇಟಿ ವಿದ್ಯೆಯನ್ನು ತೊರೆದು, ಸರ್ಕಾರಿ ಹುದ್ದೆಗೆ. ವಿಧಿ ಇಲ್ಲದೆ ಸೇರಿಕೊಂಡೆನು. ಲಂಚ ರುಷುವತ್ತುಗಳ ಗುಲಾಮನಾಗದೆ ಬಡ ಬಗ್ಗರ ಸೇವೆ ಕೈಗೊಳ್ಳುವೆ ಎಂದು ಪಿತೃಗಳಿಗೆ ಕೊಟ್ಟ ಮಾತು ಉಳಿಸಿಕೊಳ್ಳಲು ಪ್ರಯತ್ನಪಟ್ಟೆ. ಕೈಲಾಗದವರ ಕಡೆ ನ್ಯಾಯಕ್ಕಾಗಿ ಹೋರಾಡಿದೆ. ಎಲ್ಲೆ ಮೀರಲಿಲ್ಲ. ಆದರೂ, ಸಂಪೂರ್ಣ ಜಯಶೀಲನಾದೆನೆಂದು ಹೇಳಲಾರೆ. ಹಣದ ಕೊರತೆಯನ್ನು ತಂದೆ ಕೆಲವು ಕಾಲ ಪೂರೈಸುತ್ತಿದ್ದರು. ಪ್ರಾಮಾಣಿಕನಾದ ನೌಕರನಾಗಿ ದೃಢನಿರ್ಧಾರಕ್ಕೆ

ಅಂಟಿಕೊಂಡೆ. ಅನೇಕ ಹಿರಿಯ ಅಧಿಕಾರಿಗಳು ಬಹು ಪ್ರಾಮಾಣಿಕ ರಾಗಿದ್ದುದರಿಂದ ನನ್ನ ದಕ್ಷತೆ ನ್ಯಾಯಪರತೆಗೆ ಬೆಲೆ ಸಿಕ್ಕಿತ್ತು. ರಾಜ ಕೀಯ ಸೂತ್ರಧಾರಿಗಳು ಸಂಪೂರ್ಣ ಸತ್ಯವಂತರು, ನಿಷ್ಪಕ್ಷಪಾತಿಗಳು ಆಗದೆ, ಮೇಲಸ್ತರದ ಉದ್ಯೋಗಸ್ಥರು ಉತ್ತಮರಾಗುವುದು ಅಸಾಧ್ಯ. ಭವಿಷ್ಯ ಬಲವಾಗಿಲ್ಲದ ಕೆಳಸ್ತರದ ಉದ್ಯೋಗದಾರರು, ಋಜುಮಾರ್ಗ ಅನುಸರಿಸಬೇಕೆಂಬ ಅಪೇಕ್ಷೆ ವ್ಯರ್ಥ. ಜ್ಞಾನಾರ್ಜನೆಯ ಹಂಬಲ ಉಳಿಸಿ ಕೊಂಡು ದಕ್ಷತೆ, ಧೈರ್ಯಗಳಿಂದ ಕರ್ತವ್ಯ ಪಾಲನೆ ಮಾಡಿ ಜನರ ಮೆಚ್ಚಿಗೆ ಮತ್ತು ಸರ್ಕಾರದ ಪ್ರಶಂಸೆಗಳನ್ನು ಗಳಿಸಿದೆ. ನೂರಾರು ಬಹುಮಾನ ಗಳನ್ನು ಗೆದ್ದೆ. ಅತಿ ಶ್ರೇಷ್ಟವಾದ ರಾಷ್ಟ್ರಪದಕ ಪ್ರಶಸ್ತಿ ಪಡೆದೆ. ಪ್ರಾಮಾಣಿಕ, ದಕ್ಷ ಮತ್ತು ಖಂಡಿತವಾದಿ ಎಂಬ ಜನ ಮೆಚ್ಚುಗೆಯ ಆಶೀರ್ವಾದ, ಹುಮ್ಮಸ್ಸು ತುಂಬುತ್ತಿತು. ಸರ್ಕಾರ ಇಂಗ್ಲೇಂಡಿನ ಸ್ಕಾಟ್ ಲೆಂಡ್ ಯಾರ್ಡ್‌ನ ಹೆಚ್ಚಿನ ತರಬೇತಿ ಕೊಟ್ಟಿತು.

ಈ ಮಧ್ಯೆ ಅಜ್ಞಾನದಿಂದ,ಅನೇಕ ಅಕ್ರಮ ಅತಿಕ್ರಮಣ,ಅವ್ಯವಸ್ಥೆಗಳಿಂದ ಸಕ್ಕರೆ ರೋಗಕ್ಕೆ ಬಲಿಯಾದೆ. ಕೃತಕ ಶಮನಗಳಿಗೆ ಶರಣಾಗದೆ ಪರಿ ಶೋಧನೆಯಿಂದ, ಯೋಗ ಪ್ರಕೃತಿ ಚಿಕಿತ್ಸೆ, ಶಿಸ್ತು, ನೀತಿ-ನಿಯಮ ಗಳನ್ನು ದೃಢ ನಿರ್ಧಾರದಿಂದ ಅನುಸರಿಸಿ ಬೇನೆಯ ಬೇರನ್ನು ನಾಶ ಮಾಡಲು ಶಕ್ತನಾದೆ. ಮಹಾತ್ಮ ಗಾಂಧಿಯವರು ಬೋಧಿಸಿದ ಸರಳ ಜೀವನ, ಉಪವಾಸ ಅಪ್ರದರ್ಶನ, ಬ್ರಹ್ಮಚರ್ಯ ಮುಂತಾದ ನಿಯಮಗಳ ಶ್ರೇಷ್ಠತೆ ಮತ್ತು ಉಪಯುಕ್ತತೆ ಅರ್ಥವಾಯಿತು. ನೌಕರಿಯ ಶಿಸ್ತಿನಿಂದ ಖಾದಿಯ ಬಾಹ್ಯ ಉಡುಪುಗಳನ್ನು ಉಡು ತ್ತಿರಲಿಲ್ಲ. ತದನಂತರ, ಖಾದಿ ಅಲ್ಲದ ಅರಿವೆಗಳು ಮತ್ತು ವಿದೇಶಿ ವಸ್ತುಗಳು ದೂರವಾದವು. ಸಾಬೂನು ಇಲ್ಲದ ಕ್ಷೌರವು ರೂಢಿಗೆ ಬಂತು. ಮೊದಲಿನಿಂದಲೂ ಒಳ ಉಡುಪುಗಳ ಒಗೆತವನ್ನು, ಕೊಠಡಿಯ ಸ್ವಚ್ಛತೆಯನ್ನು ಪರರಿಗೆ ಒಪ್ಪಿಸುತ್ತಿರಲಿಲ್ಲ.

ನೆಹರು ಮುಂತಾದ ತ್ಯಾಗ ಪುರುಷರ ಸುರಕ್ಷತೆಯ ಕಾರ್ಯ ಬಹು ಹಗುರ ಮತ್ತು ಹರ್ಷದಾಯಕವಾದ ಕರ್ತವ್ಯವಾಗಿ ಕಾಣುತ್ತಿತ್ತು. ಮುಂದೆ

ಬಂದ. ನಿಯುವುರಹಿತ ನಾಯುಕರುಗಳಿಗೆ ಮಾಡಿದ ಸೇವೆ ಅರ್ಥಹೀನವಾಗಿ ಹೆಣಭಾರವಾಗುತ್ತಿತ್ತು. ಸರ್ಕಾರ ಮೂರು ವರ್ಷದ ಬಡಾವಣೆ ಕೊಟ್ಟಿದ್ದು ಅಲ್ಲದೆ, ಟೋಕಿಯೋ ನಗರದ ಸಂಚಾರ ಸಪ್ತಾಹಕ್ಕೆ ಕಳುಹಿಸಲು ಅಣಿ ಮಾಡಿತು. ಬೆಳೆಯುತ್ತಿದ್ದ ಮಕ್ಕಳ ಪುರೋಭಿವೃದ್ಧಿಗೆ ಆರ್ಥಿಕ ಪರಿಸ್ಥಿತಿ ಮತ್ತು ಇತರ ಸಂದರ್ಭಗಳು ಹಿತಕರವಾಗಿರಲಿಲ್ಲ. ನೌಕರಿಯಲ್ಲಿದ್ದಾಗ, ಸಹವಾಸ, ಸನ್ನಿವೇಶ ಮತ್ತು ಅಜ್ಞಾನದಿಂದ ಅನೇಕ ಮುಳ್ಳು, ಕಲ್ಲು ಮತ್ತು ಕೆಸರಿನ ದಾರಿ ತುಳಿದು ಅವಮಾನಗಳನ್ನು ಅನುಭವಿಸಿದೆ. ಇದರಿಂದ ಸ್ವಲ್ಪ ಬುದ್ಧಿ ಕಲಿತೆ. ಗುಲಾಮಿ ಮತ್ತು ಅಪರಾಧಿ ಮನೋಭಾವದ ಭಾರ, ಸರ್ಕಾರ ಕೊಟ್ಟ ವಿಶೇಷ ಸವಲತ್ತನ್ನು ನಮ್ರತೆಯಿಂದ ಬೇಡ ಎಂದು 1970ರಲ್ಲಿ ನಿವೃತ್ತನಾದೆ.

ದೃಢ ನಿರ್ಧಾರದಿಂದ ಹೊಸ ಜೀವನವನ್ನು ಪ್ರಾರಂಭ ಮಾಡಿದೆ. ಪುನಃ ಪಿತ್ರಾರ್ಜಿತ ಆಸ್ತಿಯ ಅಭಿವೃದ್ಧಿಗೆ ಪಣತೊಟ್ಟೆ. ಪ್ರಕೃತಿ ಮಾತೆ ಆಕರ್ಷಿಸಿದಳು. ತೋಟಗಾರಿಕೆ, ಪಶು, ಕುದುರೆ ಮತ್ತು ಇತರೆ ಪ್ರಾಣಿ ಪಾಲನೆ ಬಹು ಪ್ರಿಯವಾದ ಕರ್ತವ್ಯವಾಯಿತು. ತಂದೆ ಪಾಲು ಕೊಟ್ಟ ಬರಡು ಭೂಮಿಯನ್ನು ಎರಡು ದಶಕಗಳಲ್ಲಿ ತೆಂಗು ಮುಂತಾದ ಹಣ್ಣಿನ ಮರಗಳಲ್ಲದೆ ಹತ್ತಾರು ಸಾವಿರ ಕಾಡು ಮರಗಳನ್ನು ಬೆಳೆಸಿ ಪುಟ್ಟ ಅರಣ್ಯವನ್ನು ರಚಿಸಿ, ಅದನ್ನು ಆನಂದಿಸಲು ಪರಿಚಿತರನ್ನು ಆಹ್ವಾನಿಸುತ್ತಿದ್ದೇನೆ. ಇಲ್ಲಿ ಕಾಣುವ ಹಾವು, ಚೇಳು ಹೆಮ್ಮೀರಕ ಮುಂತಾದ ವಿಷಜಂತುಗಳನ್ನು ಅಲ್ಲದೆ ವನ್ಯ ಮೃಗಗಳನ್ನು ಕೊಲ್ಲುವುದನ್ನು ನಿಷೇಧಿಸಿದೆ. ಈ ಪ್ರದೇಶವನ್ನು ತಂದೆಯ ಹೆಸರಿನಲ್ಲಿ "ದೇವ ತಪೋವನ ಸೇವಾ ಟ್ರಸ್ಟ್" ಎಂದು ನೋಂದಾಣಿಸಿ ಹಳ್ಳಿಗರ ಸೇವೆಗೆ ಅನು ಮಾಡಿದೆ. ಯೋಗಾಸನ, ಪ್ರಕೃತಿ ಚಿಕಿತ್ಸೆ ಮತ್ತು ಗುರಿ ತಪ್ಪಿದ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಕೊಡುವ ಆಸೆ ತುಂಬಿದೆ. ಜೊತೆಗೆ ಇಂಗ್ಲೆಂಡಿನ ಪ್ರವಾಸದಲ್ಲಿ ಹೊಳೆದಿದ್ದ ಕೈಗಾರಿಕಾ ಸುರಕ್ಷತೆ ಮತ್ತು ಖಾಸಗಿ ಪತ್ತೇದಾರಿ ಸಂಸ್ಥೆಯನ್ನು ಮೊಟ್ಟ

ಮೊದಲನೆಯದಾಗಿ ಪ್ರಾರಂಭಿಸಿದೆ ಮೊದಲೆರಡು ವರ್ಷಗಳು ಕಷ್ಟ ದಾಯಕವಾಗಿದ್ದವು. ನೌಕರಿಯಲ್ಲಿ ಸಿಕ್ಕದಿದ್ದ ಶ್ರೇಯಸ್ಸು, ಸೌಭಾಗ ನನಗೊದಗಿತು. ಬಹುಶಃ ಬಡ-ಬಗ್ಗರ ಪ್ರಾರ್ಥನೆಯು ಫಲ ವಿರಬೇಕೆಂದು ನೆನೆಸುತ್ತೇನೆ. ಆಧ್ಯಾತ್ಮಿಕ ಅಭಿವೃದ್ಧಿಯ ಅವಶ್ಯಕತೆಗಾಗಿ ರಾಮಕೃಷ್ಣ ಆಶ್ರಮದ ನಿಕಟ ಸಂಬಂಧವನ್ನು ಬೆಳೆಸಿಕೊಂಡೆ. ಆಶ್ರಮ ಹೊರತಂದಿರುವ ಅನೇಕ ಗ್ರಂಥಗಳನ್ನು ವ್ಯಾಸಂಗ ಮಾಡಿದೆ. ಅಧ್ಯಾತ್ಮಿಕ ಪಾಂಡಿತ್ಯದ ಸ್ವಾಮಿಗಳ ಪ್ರವಚನಗಳು ಪ್ರಬಲವಾದ ಪ್ರಭಾವ ಬೀರಿವೆ ಆ ತ್ಯಾಗ ಪುರುಷರಿಗೆಲ್ಲಾ ನಾನು ಚಿರಋಣಿ. ಭಗವದ್ಗೀತೆ ನನಗೆ ಪ್ರಿಯವಾಗಿದೆ. ವಿವೇಕಾನಂದ, ಗಾಂಧೀಜಿ ಮುಂತಾದ ಗಣ್ಯರ ಬರವಣಿಗೆಗಳ ಆಕರ್ಷಣೆ ಬಲವಾಯ್ತು ರಾಮಾಯಣ, ಮಹಾ ಭಾರತ, ವೇದ, ಉಪನಿಷತ್ತು ಮುಂತಾದ ಗ್ರಂಥಗಳನ್ನು ಅಲ್ಲದೆ ಬೈಬಲ್ಲು, ಖುರಾನ್ ಇತರೆ ಧರ್ಮಗ್ರಂಥಗಳನ್ನು ವ್ಯಾಸಂಗ ಮಾಡಿದೆ. ಆಶ್ರಮಕ್ಕೆ ಅಲ್ಲದೆ,ಚರ್ಚ್, ಮಸೀದಿ, ಬುದ್ಧವಿಹಾರ, ಗುರುದ್ವಾರಗಳಲ್ಲಿ ಪ್ರಾರ್ಥನೆ ಸಲ್ಲಿಸಿದೆ ಕೆಲವು ಪುಸ್ತಕಗಳನ್ನು ಪುನಃ ಪುನಃ ಓದುವ ಬಯಕೆ ಬಲವಾಯ್ತು.

ಮೂರು ಮಾಸಪತ್ರಿಕೆಗಳನ್ನು ಪ್ರಾರಂಭಿಸಿ, ಒಂದು ಮುದ್ರಣಾಲಯ ವನ್ನು ತೆರೆದೆ. ಈ ಮಧ್ಯೆ ಒಂದು ಬ್ಯಾಂಕನ್ನು ಪ್ರಾರಂಭಿಸಿದ ಸ್ನೇಹಿ ತರಿಗೆ ನೆರವಾದೆ. ಅದರ ಅಧ್ಯಕ್ಷನಾಗಿ ಪ್ರಾಮಾಣಿಕತೆ ಮತ್ತು ದಕ್ಷತೆ ಯಿಂದ ಮೂರು ವರ್ಷ ಕಾಲ ಸೇವೆ ಸಲ್ಲಿಸಿದೆ. ಕೆಲವು ವಿದ್ಯಾ ಸಂಸ್ಥೆಗಳ ಸೇವೆಯಲ್ಲೂ ನಿರತನಾದೆ. 1979ರಲ್ಲಿ "ಅಮೇರಿಕನ್ ಸೊಸೈಟಿ ಫಾರ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ" ಅವರ ಆಹ್ವಾನದ ಮೇಲೆ ಅಮೇರಿಕ ರಾಷ್ಟ್ರವನ್ನು ಸುತ್ತಿಬಂದೆ. ವಿಜ್ಞಾನದ, ವಿಕಾಸನದ, ವೈಶಾಲ್ಯ ಮತ್ತು ವೈಶಿಷ್ಟ್ಯತೆ ಸರ್ವವ್ಯಕ್ತವಾಗಿದೆ. ವಿಪರೀತ ವಿಧ್ವಂಸಕತೆ ಗುಪ್ತವಾಗಿದೆ ವಿಲಕ್ಷಣಗಳ ವಿಲಾಸಗಳು, ರಾಗ ಭೋಗಗಳು ಎದ್ದು ಕಾಣುತ್ತಿವೆ. ಅಶಾಂತಿ, ಅತೃಪ್ತಿ, ಆತುರತೆ, ಅಹಮಹಮಿಕೆ(ಅತಿಸ್ಪರ್ಧೆ)ಗಳೇ ಅವರ ಮುಖ ಮುದ್ರೆ. ಆಧ್ಯಾತ್ಮಿಕತೆಯನ್ನು ಅರಸುವವರ ಸಂಖ್ಯೆಗೇನು

ಕಡಿಮೆಯಿಲ್ಲ. ಭಾರತವನ್ನು ವ್ಯಾಪಕವಾಗಿ ಪ್ರವಾಸ ಮಾಡಿದ್ದೇನೆ
ಅನೇಕ ಕಹಿ ಅನುಭವಗಳ ಜೊತೆಗೆ ಸುವಿಚಾರಗಳನ್ನು ಕಲಿತಿದ್ದೇನೆ

ಪಾವನ ಪುರುಷರಾದ ಕನಕಪುರದ ಕರ್ಮಯೋಗಿ ಕರಿಯಪ್ಪನವರ ಇಚ್ಛೆ
ಯಂತೆ, ಅವರ ವಿದ್ಯಾಸಂಸ್ಥೆಯ ಸದಸ್ಯನಾದೆ. ಸಚಿವ ಸ್ವಕ್ಷ್ಯಕಾರರಾದ
ಪೂಜ್ಯರು ರಾಜಕೀಯಕ್ಕೆ ನನ್ನನ್ನು ಒಗ್ಗಿಸಲು ಇಂಗಿತ ತೋರಿದರೂ,
ನನಗೆ ಬೇಡವಾಯಿತು. ಅವರ ನಿಧನದಿಂದ ಅವರು ಕಟ್ಟಿ ಬೆಳೆಸಿದ್ದ ಬೃಹತ್ತು
ವಿದ್ಯಾಸಂಸ್ಥೆಗೆ ಅಧ್ಯಕ್ಷನಾದೆ. ಅದು ನನ್ನ ಪುಣ್ಯವೆಂದು ತಿಳಿದು ಸೇವೆ
ಸಲ್ಲಿಸಿದೆ. ಬಹು ಪ್ರಾಮಾಣಿಕತೆ, ನಿಷ್ಠೆ, ಭಕ್ತಿಯಿಂದ ನನ್ನ ಕರ್ತವ್ಯ
ಗಳನ್ನು ಮಾಡಲು ಪ್ರಯತ್ನಪಟ್ಟೆ. ಹತ್ತು ಜನಕ್ಕೆ ಕಣ್ಣಾದ ಸಂಸ್ಥೆಗಳ
ಸೂತ್ರಧಾರತ್ವ ಕಷ್ಟ. ಎಲ್ಲರಿಗೂ ಅದರ ಮೇಲೆ ಆಸೆ. ನಿಷ್ಪಕ್ಷಪಾತ
ವಾದ ಕೆಲಸ ಅನೇಕರಿಗೆ ಹಿಡಿಸದು. ಗುಂಪುಗಾರಿಕೆ ತಪ್ಪಿಸಲು ಅಸಾಧ್ಯ
ವಾಯಿತು. ವಿಧಾನಸಭಾ ಸದಸ್ಯರುಗಳು ಮತ್ತು ಇತರೆ ಸ್ಥಳೀಯ
ರಾಜಕೀಯ ಮುಖಂಡರ ವೈರತ್ವ ವಿಪರೀತವಾಯಿತು. ವಿದ್ಯಾಸಂಸ್ಥೆಯ
ಉಳಿವಿಗಾಗಿ, ರಾಜಕೀಯ ಮುಖಂಡರ ಸ್ನೇಹ ಬೇಕಾಯಿತು. ಕಾಂಗ್ರೆಸ್
ವರಿಷ್ಠರ ಇಚ್ಛೆಯಂತೆ 1983ರಲ್ಲಿ ಪ್ರತಿಷ್ಠಿತ ಕನಕಪುರ ಚುನಾವಣೆಗೆ
ನಿಂತು ಸೋತೆ. ಚುನಾವಣೆಯ ಅನಿಷ್ಟಗಳ ಕಹಿ ಅನುಭವ ಕಂಡೆ.
ಆಸೆ ಅತಿಯಾಯಿತು. ರಾಜಕೀಯ ನಾಯಕತ್ವದಿಂದ ಪರರ ಕಷ್ಟವನ್ನು
ಕಮ್ಮಿ ಮಾಡಬಹುದೆಂಬ ಆದರ್ಶಗಳಿಂದ ಹಳ್ಳಿ ಹಳ್ಳಿಗೂ ತಿರುಗಿದೆ.
ಅವರ ನಿಕಟ ಸಂಬಂಧ ಬೆಳೆಸಿಕೊಂಡೆ. ಅವರು ತಮ್ಮ ಹಕ್ಕನ್ನು
ಸಾಧಿಸಲು ವಿಫಲರಾಗಿದ್ದಾರೆ ಎಂಬ ಅಂಶ ಕೊರೆಯುತ್ತಿತ್ತು. ಅವರ
ನೂರಾರು ಸಮಸ್ಯೆಗಳನ್ನು ಪಂಕ್ತಿಗಳ ಗಮನಕ್ಕೆ ಬರಹ ಮೂಲಕ
ತಂದೆ. ಅದರಿಂದ ಫಲ ಸಿಕ್ಕಿತು ಎಂದು ಹೇಳಲಾರೆ. ಆಸೆ, ಹಠ,
ಸ್ಪರ್ಧೆ ತೀವ್ರವಾಯಿತು. ಸ್ವಾರ್ಥ ಸಾಧನೆಗಾಗಿ ಸರ್ವರಿಗೂ ಸಲಾಂ
ಹೊಡೆದೆ. ಭಯಗ್ರಸ್ತನಾದೆ. ಆತ್ಮಗೌರವದ ಅರ್ಥದ ವಿವೇಚನೆ
ಇಲ್ಲವಾಯಿತು. ಸ್ಪೈಪೋಟಿಯ ಪಿಶಾಚಿ ಹಿಡಿದು ಮನಸ್ಸು ಅಶಾಂತಿಯ
ತವರಾಯಿತು. ನಿಜ ಸೇವೆಗೆ, ಪ್ರಾಮಾಣಿಕತೆಗೆ ಮಾನ್ಯತೆ ಇಲ್ಲದ ಆರ

ವಾಯಿತು. ಅನೇಕ ಸಂದರ್ಭಗಳಲ್ಲಿ ನನ್ನನ್ನು ನಾನೇ ಈ ರೀತಿಯಾಗಿ ಪ್ರಶ್ನಿಸಿಕೊಂಡೆ. "ಪರರಿಗಾಗಿ ಇಷ್ಟೊಂದು ದೊಡ್ಡ ಜವಾಬ್ದಾರಿ ಹೊರಲು ಮನಸ್ಸು ಏಕೆ ಇಷ್ಟು ಕಾತುರವಾಗಿದೆ ? ಈ ತೀವ್ರ ಮನೋವ್ಯಾಕುಲತೆಯ ಉದ್ದೇಶ ಏನು? ತ್ಯಾಗ ಮತ್ತು ಸೇವೆಯೇ? ಅಂತಸ್ತು ಅಧಿಕಾರ ಮಾನ್ಯತೆಯೇ? ಆಸ್ತಿ ಗಳಿಸುವ ಹಂಬಲವೆ? ಇದು ಖಂಡಿತ ತ್ಯಾಗ ಸೇವೆಯ ಗುರಿಯಲ್ಲ ಎಂಬ ಸತ್ಯವನ್ನು ಮನಸ್ಸು, ಅರೆ ಮನಸ್ಸಿನಿಂದ ಒಪ್ಪಿಕೊಂಡಿತು. ತ್ಯಾಗ, ಸೇವೆ ಎಂಬುದು ಬೂಟಾಟಿಕೆ ಎಂಬ ನಗ್ನ ಸತ್ಯ ಅರ್ಥವಾಯಿತು. ಆಳುವ ಜನ ತಮ್ಮ ಏಳ್ಗೆಯನ್ನು ತಾವು ರೂಪಿಸಿಕೊಳ್ಳಬೇಕೆಂಬುದೇ ಜನತಂತ್ರದ ಘನ ಉದ್ದೇಶ್ಯ ಜನರ ನಾಯಕ ಅಥವ ಸೇವಕ ಯಾರು ಎಂಬುದಕ್ಕೆ ಪೆಹಲಿಯ ಅಂಥ ನಿರ್ಣಯವೇ ಆಖೈರು.

ವಸ್ತು ಸ್ಥಿತಿ ಹೀಗಿರುವಾಗ ಆದರ್ಶ, ಪ್ರಜಾಸೇವಕರ ಹೊರ ಹೊಮ್ಮಿಕೆ ಅಸಾಧ್ಯ ಎಂಬ ನಿಜ ಅರಿವಾಯ್ತು. ಮತದಾರರ ಮತಿ ಮಟ್ಟ ಬಹಳ ಬಹಳವಾಗಿ ಮೇಲೇರಬೇಕಾಗಿದೆ ಅಲ್ಲಿಯವರೆಗೂ ಆಡಳತಕ್ಕೆ ಸುಗುಣರ ಆಗಮನ ಅಸಾಧ್ಯ ಸಾಮಾನ್ಯರಲ್ಲಿ ಸಜ್ಜನತೆ ಸೃಷ್ಟಿಸಲು ಅಧಿಕಾರಸ್ಥರು ಸಂಪನ್ನರಾಗಬೇಕು, "ಮದುವೆಯಾಗದೆ ಹುಚ್ಚು ಬಿಡದು, ಹುಚ್ಚು ಬಿಡದೆ ಮದುವೆ ಆಗದು" ಎಂಬ ಗಾದೆಯಂತೆ ಇದೆ ಈ ಎಲ್ಲಾ ಅಂಶಗಳ ಧೀರ್ಘ ಮಥನ ಮಾಡಿದ ಮೇಲೆ ಚುನಾವಣೆಗೆ ನಿಲ್ಲುವ ಆಸೆ ವ್ಯರ್ಥ ಎಂಬ ದೃಢ ನಿರ್ಧಾರಕ್ಕೆ ಬಂದೆ. ಆದರೂ ಕಾಂಗ್ರೆಸ್ ಪಕ್ಷ ಬದಲಾಯಿಸುವುದು ಸುಸಂಸ್ಕೃತಿಯಲ್ಲ ಎಂಬುದನ್ನು ಮರೆತಿಲ್ಲ ಈ ಮನಸ್ಸಿನ ಮಾರ್ಪಾಡಿನಿಂದ ನಾನೇ ಪ್ರಧಾನಿ ಎಂಬ ಸಂತೋಷ ಹುಮ್ಮಸ್ಸು. ನಿರ್ಭಯ, ನೀತಿ, ಅವರಿಸಿ ಪ್ರಶಾಂತಿ ದೊರೆಯಿತು ಸ್ಥಿರ ಮನಸ್ಸು, ಸುಕಾರ್ಯಗಳ ಸುಳಿವನ್ನು ಸೂಚಿಸಿತು. ನಿಸ್ವಾರ್ಥತೆಯಿಂದ ರಾಷ್ಟ್ರಾಡಳಿತದಲ್ಲಿ ತಪ್ಪು, ಅನ್ಯಾಯ, ಅಚಾತುರ್ಯ ಕಂಡಾಗ ನಿಷ್ಪಕ್ಷಪಾತದಿಂದ ಆಗು - ಹೋಗುಗಳ ಭಯವಿಲ್ಲದೆ ಲಿಖಿತ ಮೂಲಕವಾಗಿ ನಮ್ರತೆಯಿಂದ ಹೇಳುತ್ತಲೇ ಬಂದಿದ್ದೇನೆ. ಕಾಂಗ್ರೆಸ್ಸಿನ ಶಿಸ್ತಿಗೆ ಒಳ

ಪಟ್ಟು ಆತ್ಮ ಗೌರವ ಕಳೆದುಕೊಳ್ಳದೆ ಪ್ರಚಾರ ಮತ್ತು ಪ್ರದರ್ಶನಗಳಿಲ್ಲದೆ ಸಂಬಂಧಪಟ್ಟ ಮಂತ್ರಿ, ಮುಖ್ಯ ಮಂತ್ರಿ, ಪ್ರಧಾನಿ ಮುಂತಾದ ಗಣ್ಯರ ಗಮನಕ್ಕೆ ತರುವುದು ನನ್ನ ಪದ್ಧತಿಯಾಗಿದೆ. ಆಡಳಿತದಲ್ಲಿ ಒಳ್ಳೆಯ ಕೆಲಸಗಳನ್ನು ಕಂಡಾಗ ಸಂತೋಷದಿಂದ ಅಭಿನಂದಿಸುತ್ತಿದ್ದೇನೆ ಇದಕ್ಕೆ ಮಾತ್ರ ಕೂಡಲೇ ಉತ್ತರ ದೊರೆತಿದೆ ಇಂಥ ಲೇಖನಗಳು ಸಾವಿರಾರು ಆಗಿವೆ. ದಕ್ಷ ಮತ್ತು ಪ್ರಾಮಾಣಿಕ ಆಡಳಿತಗಳ ದೃಷ್ಟಿಯಿಂದ ಈ ಪತ್ರ ವ್ಯವಹಾರಗಳನ್ನು ಪುಸ್ತಕ ರೂಪದಲ್ಲಿ ತರುವ ಮಹದಾಸೆ ಇದೆ.

ಈಶ್ವರನ ಅಸ್ತಿತ್ವ, ಅತಿ ಅವಶ್ಯಕವಾದ, ಆಧಾರ, ಆಶ್ರಯ, ಆಸರೆ, ನೆಲೆ ಎಂದು ಅನಾದಿ ಕಾಲದಿಂದ, ಪ್ರಾಜ್ಞರು ಸಮರ್ಥಿಸಿರುವ ಸಾರ್ವತ್ರಿಕವ ತತ್ತ್ವ ವಿಶ್ವವ್ಯಾಪ್ತಿಯ ಅನುಭವಗಳನ್ನು ಆತ್ಮಪೂರ್ವಕವಾಗಿ ಅಂಗೀಕರಿಸಿ, ಆಲಿಂಗಿಸಿಕೊಂಡಿದ್ದೇನೆ ಮನಸ್ಸಿಟ್ಟು ದೃಷ್ಟಿಸಿದರೆ, ಸೃಷ್ಟಿಯ ವಿಶಿಷ್ಟತೆಯ ಸೊಬಗು ಸರ್ವರಿಗೂ ಲಭ್ಯವಾಗುತ್ತದೆ. ಸರಳ ಗುಲಾಬಿಯ ಸೌಂದರ್ಯ, ಬೆಟ್ಟದ ತುದಿಯಿಂದ ಕಾಣುವ ದೃಶ್ಯ, ಮುಗ್ಧ ಮಗುವಿನ ಅನಿರ್ಬಂಧ ಆನಂದ, ಮಿಣುಕು ಚುಕ್ಕಿ ಸದಾ ಚಲಿಸುತ್ತಿರುವ ಬಣ್ಣ ಬಣ್ಣದ ಮೋಡಗಳಿಂದ ಶೃಂಗರಿಸಲ್ಪಟ್ಟಿರುವ ಎಲ್ಲೆ, ಇಲ್ಲದ ಆಕಾಶ, ಕ್ಷಣ ಮಾತ್ರವೂ ಸುಮ್ಮನಿರದೆ ಏರಿ ಇಳಿಯುವ ಬೆಟ್ಟದ ಅಲೆ, ಅಲ್ಲದೆ ಕೋಟಿ ಕೋಟಿ ಜೀವಿಗಳ ಪೋಶಕ ಮತ್ತು ನಿರ್ಜೀವ ವಸ್ತುಗಳ ಭಂಡಾರದ ಹಸಿರು ಸಮುದ್ರ; ಗುಡುಗು, ಮಿಂಚು, ಮಳೆ, ಪ್ರವಾಹ, ಗಿಡ, ಮರ ಬಳ್ಳಿ ಪುಷ್ಪ, ಚಿಗುರುಗಳು ನಾನಾ ವಿಧದ ಪ್ರಾಣಿ ವರ್ಗಗಳ ಸೊಬಗುಗಳು, ಮಾನವನನ್ನು ತೃಣೀಕರಿಸುತ್ತವೆ ಅವನ ಅಟ್ಟಹಾಸ ನಿರರ್ಥಕ. ಪ್ರಕೃತಿಯ ಅವರ್ಣನೀಯವಾದ ದಿವ್ಯ, ಉಜ್ವಲ, ವೈಭವ, ಪ್ರತಾಪ ಭೂಷಣ, ಘನತೆ, ಕಾಲನಿಷ್ಠೆ, ನಿರ್ದಿಷ್ಟತೆ, ಕುಶಲತೆ ಮುಂತಾದ ಶ್ರೇಷ್ಠತೆಗಳು ಸ್ತಂಭೀಭೂತಗೊಳಿಸುತ್ತವೆ ಈ ಪ್ರಕೃತಿಯ ಒಂದೊಂದು ಅಂಶವೂ ಈಶ್ವರನ ಪ್ರತೀಕ. ಸೃಷ್ಟಿ, ಈಶ್ವರ, ಪ್ರಕೃತಿ ಎಲ್ಲಾ ಒಂದೇ.

ಮಾನವನ ಸಮಸ್ಯೆಗಳಿಗೆ ಕೊನೆಯಿಲ್ಲ. ಪ್ರಕೃತಿ ಅಥವಾ ವಿಶ್ವಕ್ಕೆ ಯಾವ ಸಮಸ್ಯೆಗಳು ಇಲ್ಲ. ಮಾನವ ಪ್ರಕೃತಿಯಿಂದ, ಪ್ರತ್ಯೇಕನಾಗಿರುವುದ

ರಿಂದ ಅವನ ಸಮಸ್ಯೆಗಳು ಅಸಂಖ್ಯ. ತೊಂದರೆ, ಭಯ, ಭೀತಿ ತಾಪತ್ರಯ, ರೋಗ ರುಜಿನ, ವೃದ್ಧಾಪ್ಯ, ಹಗೆತನ, ವೈರತ್ವ, ದುರಾದೃಷ್ಟ, ಕೋಪ, ಸಿಡುಕು, ಅಪಾಯ, ಕಷ್ಟ, ತಪ್ಪುನೆಪ್ಪು, ಪ್ರಾಮುಖ್ಯತೆ, ಮೆಚ್ಚಿಗೆ, ಒಲವು, ಬೇಜಾರು, ನಾಶತ್ವ, ಮುಂತಾದ ಅನಿಷ್ಟಗಳಿಗೆ ಕೊನೆಯಿಲ್ಲ. ಮಾನವನೂ ಪ್ರಕೃತಿಯ ಒಂದು ಭಾಗ, ಪಾಲುಗಾರ. ಆ ಅಖಂಡ ವಿಶ್ವದ, ಒಂದು ಅಂಶ ಎಂಬ ಸತ್ಯವನ್ನು ಮರೆತಿರುವುದರಿಂದ ಅವನ ಅಳಲುಗಳಿಗೆ ಕೊನೆಯಿಲ್ಲ ದೇವರಲ್ಲಿರುವ ದಿವ್ಯತೆಗಳೆಲ್ಲ ನಮ್ಮ ಸ್ವತ್ತು. ನಾವು ಆ ಪಾವನತೆಗಳ ಪಾಲುಗಾರರು. ನಾವು ಒಂಟಿಗಳಲ್ಲ, ಪಾಪಿಗಳಲ್ಲ, ಮೂಢರಲ್ಲ, ಅಶಕ್ತರಲ್ಲ ಎಂಬ ಆತ್ಮಶ್ರದ್ಧೆ ಮತ್ತು ದೃಢ ನಂಬಿಕೆ ನಮ್ಮ ದುಃಖಗಳನ್ನು ದೂರ ಮಾಡುತ್ತವೆ. ನದಿ, ಅಡ್ಡಿ ಆತಂಕಗಳನ್ನು, ಎದುರಿಸಿ, ಮುನ್ನುಗ್ಗಿ ಕೋಟಿ ಜೀವಿಗಳಿಗೆ ಆನಂದ ಕೊಟ್ಟು, ಸಾಗರ ಸೇರಿ ಪ್ರಸನ್ನತೆ ಪಡೆಯುವಂತೆ, ನಮ್ಮ ಅಂಶಃಶಕ್ತಿಯನ್ನು ಉಪಯೋಗಿಸಿ, ಶಾಂತತೆ ಪಡೆದು ದುಃಖರಹಿತವಾಗಿರಬೇಕಾಗಿದೆ. ತನ್ನ ಭಾರವನ್ನೆಲ್ಲ ಪ್ರಕೃತಿ ಅಥವಾ ದೇವರ ಮೇಲೆ ಹೊರಿಸಿ, ವಿಶ್ವದ ಇತರೆ ಪಾಲುಗಾರರು, ಹೊತ್ತಂತೆ ತನ್ನ ಜವಾಬ್ದಾರಿ ಹೊತ್ತು ಕರ್ತವ್ಯಗಳನ್ನು ನಿಸ್ವಾರ್ಥತೆಯಿಂದ ನೆರವೇರಿಸಿದರೆ ತನಗೂ ಸಮಸ್ಯೆಗಳ ಭೀತಿ ತಟ್ಟದು. ಈ ತತ್ವವನ್ನು ಆದಷ್ಟು ಅನುಸರಿಸಿ, ಆನಂದ ಪಡುತ್ತಿದ್ದೇನೆ

ವೈಚಾರಿಕತೆಗೆ ನಿಲುಕದ, ನಿರರ್ಥಕ ನಿರ್ಣಯಗಳನ್ನು ನಿರಾಕರಿಸಿ, ನಿರಾಳತೆ ಹೊಂದುವ, ಶಕ್ತಿ ಸ್ವಲ್ಪ ಮಟ್ಟಿಗೆ ಸಂದಿದೆ ಶೈಶವಾವಸ್ಥೆಯಿಂದ ಅಗೋಚರವಾಗಿ ಅಂಟಿಕೊಂಡು ಇದ್ದ ಶಕುನಗಳಲ್ಲಿನ ಶ್ರದ್ಧೆ ಕ್ರಮೇಣ ಕಡಿಮೆಯಾಗಿ ಇಂದು ಅವುಗಳ ಕಪಿಮುಷ್ಟಿಯಿಂದ ವಿಮುಖನಾಗಿದ್ದೇನೆ ಜ್ಯೋತಿಷ್ಯ, ಜಾತಕ, ಶಾಸ್ತ್ರ, ಹಸ್ತ ಮುದ್ರಿಕೆ ಮುಂತಾದ ಭವಿಷ್ಯ ಭಾವೋದ್ರೇಕಗಳ ಬಂಧನದಿಂದ ಬಿಡುಗಡೆಯಾಗಿದ್ದೇನೆ. ಅಮಾವಾಸ್ಯೆ ಮಂಗಳವಾರ, ಆಷಾಢಮಾಸ, ಪಿತೃಪಕ್ಷ, ರಾಹುಕಾಲ, ಗುಳಿಕಕಾಲ ಯಮಗಂಡಕಾಲ ಮುಂತಾದ ಸಾಮಾನ್ಯ ನಂಬಿಕೆಯ ಅಶುಭ ಸಮಯ

ಗಳಲ್ಲೂ ಕೈಗೊಂಡ ಕಾರ್ಯಗಳು, ಯಶಸ್ವಿಯಾಗಿ ಕೈಗೂಡಿ, ಶ್ರೇಯಸ್ಕರ ವಾದ ಫಲಗಳನ್ನು ತಂದಿವೆ   ಜೀವಿಯ ಜನನ ಮರಣಗಳಲ್ಲಿ ಒಂದು ಕಾಲವಿಲ್ಲ.   ಸೃಷ್ಟಿಯಲ್ಲಿ ಸರ್ವಕ್ಕೂ ಸ್ಪಷ್ಟ, ನಿರ್ದಿಷ್ಟ ಅಲ್ಲದೆ ಅರ್ಥ-ಗರ್ಭಿತವೂ ಆದ ಗೌರವ ಸ್ಥಾನ ಸ್ಥಾಪಿತವಾಗಿದೆ.   ಹೀಗೆ ಹೊತ್ತು ಹರನನ್ನು ಹೊಲಸು ಮಟ್ಟಕ್ಕೆ ತಳ್ಳಿದ ನನ್ನ ಅಲ್ಪಜ್ಞತೆಗೆ, ನನ್ನನ್ನು ನಾನೇ ಹೀಯಾಳಿಸಿಕೊಂಡಿದ್ದೇನೆ.   ಭ್ರಷ್ಟತೆ, ಲಂಚಕೋರತನ ದುರ್ವ್ಯಾಪಾರ ಮುಂತಾದ ಮಾನವ ದೌರ್ಬಲ್ಯಗಳನ್ನು, ದಯಾಮಯ ಯಥಾರ್ಥ, ಪ್ರಾಮಾಣಿಕ, ಸತ್ಯ, ಸರಳ, ಪರಿಶುದ್ಧ, ಪರಿಪೂರ್ಣ ಸಂಪೂರ್ಣ ಮುಂತಾದ ಶ್ರೇಷ್ಠತೆಗಳ ಭಂಡಾರನಾದ ಭಗವಂತನ ಮೇಲೆ ಹೊರಿಸಿರುವ ನನ್ನ ಶೋಚನೀಯ ಸಂಕುಚಿತ ಬುದ್ಧಿಯನ್ನು ಅಲ್ಲಗಳೆದು, ನನ್ನ ಅಹಂಕಾರಕ್ಕೆ ಅನುದಿನ ಅನುತಾಪ ಪಡುತ್ತಲೇ ಇದ್ದೇನೆ. ಪುರೋಹಿತರು, ಪೂಜಾರಿಗಳು ಮುಂತಾದ ಮಧ್ಯಸ್ಥಗಾರರ ಮಾಟದಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಸಮಾಜ ವ್ಯಕ್ತಿಯಾದ ನನಗೆ ಇನ್ನೂ ಫಲಿಸಬೇಕಾಗಿದೆ.

ವ್ಯಕ್ತಿಯ ಪುರೋಭಿವೃದ್ಧಿಗೆ, ಶ್ರೇಯಸ್ಸಿಗೆ, ಭದ್ರ ತಳಹದಿಯು, ನೈತಿಕ ಮುನ್ನಡೆ ಮುಖ್ಯ.  "ತನ್ನ ಅಭ್ಯುದಯಕ್ಕೆ ತಾನೇ ಶಿಲ್ಪಿ".  ಇದಕ್ಕೆ ಪ್ರತೀ ಘಳಿಗೆಯಲ್ಲೂ ಪ್ರಯತ್ನ ಅವಶ್ಯಕ ಎಂಬ ಅಂಶ ಮನದಟ್ಟಾಗಿದೆ. ಒಂದು ಸಂಸಾರವನ್ನು, ಸುಸಂಸ್ಕೃತ ಪ್ರಜೆಗಳನ್ನಾಗಿ ಮಾರ್ಪಾಡು ಮಾಡುವುದೇ ಶ್ರೇಷ್ಠ ಪೂಜೆ, ರಾಷ್ಟ್ರ ಭಕ್ತಿ ಮತ್ತು ವಿಶ್ವಸೇವೆ. ಮಕ್ಕಳನ್ನು ಚಿಕ್ಕಂದಿನಿಂದಲೇ ಶೀಲವಂತರಾಗಿ, ಶುಚಿ ಬಾಳ್ವೆ ನಡೆಸಿ, ಮೇಧಾವಿಗಳು, ದೇಶ ಭಕ್ತರು, ಸಮಾಜ ಸೇವಕರು, ಸಜ್ಜನರು, ದೃಢಕಾಯರು ಆಗಿ ಬೆಳೆಸಬೇಕಾದುದು ಪ್ರತಿ ಗೃಹಸ್ಥನ ಆದ್ಯ ಕರ್ತವ್ಯ.  ನಮ್ಮ ಧರ್ಮ ಗ್ರಂಥಗಳು ಮುಂದಿನ ಪೀಳಿಗೆಯ ಗೌರವ, ಸುಖ, ಸಂತೋಷಗಳನ್ನು ಕೈಗೂಡಿಸಿಕೊಂಡು, ಧೀರರಾಗಿ, ಸತ್ಯವಂತರಾಗಿ, ಸಾಹಸಿಗಳಾಗಿ, ಪೌರುಷವಂತರಾಗಿ, ಚೈತನ್ಯಕಾರರಾಗಿ, ಉಪಕಾರಿಗಳಾಗಿ ಬಾಳಲು ನಿರ್ಮಿತವಾಗಿದೆ.  ಅವುಗಳಲ್ಲಿರುವ ತತ್ವಗಳನ್ನು ಶ್ರದ್ಧೆಯಿಂದ

ಅನುಷ್ಠಾನಕ್ಕೆ ತರಬೇಕಾಗಿದೆ.

ಈ ಆದರ್ಶಗಳನ್ನು ಕೈಗೂಡಿಸಿಕೊಳ್ಳಲು ಮನೆಯ ಸದಸ್ಯರೆಲ್ಲ, ಪ್ರಾತಃ ಕಾಲ ಒಕ್ಕೂಟ ಪ್ರಾರ್ಥನೆ ನಡೆಸುತ್ತಾ ಬಂದಿದ್ದೇವೆ. ರಾಮಾಯಣ ಮಹಾಭಾರತ, ಗೀತೆ ಮುಂತಾದ ಗ್ರಂಥಗಳ ಜೊತೆಗೆ ಪರ ಮತಗಳ ಗ್ರಂಥಗಳನ್ನು ಓದಿ ಮನನ ಮಾಡುತ್ತಿದ್ದೇವೆ. ಅವುಗಳ ಹಿತಬೋಧನೆಗಳು ಮಕ್ಕಳ ನೈತಿಕ ಭದ್ರ ತಳಹದಿಗೆ ಸಹಾಯವಾಗಿದೆ ಅಲ್ಲಿನ ಪ್ರಸಂಗ ಮತ್ತು ಸನ್ನಿವೇಶಗಳು ಅನೇಕ ಸಮಸ್ಯೆಗಳ ಪರಿಹಾರಕ್ಕೂ ಅಲ್ಲದೆ ಸಂಸಾರದ ಸಹಕಾರ, ವಿಶ್ವಾಸ, ಅನ್ಯೋನ್ಯತೆ ಮತ್ತು ಶಾಂತತೆಯನ್ನು ಭದ್ರಪಡಿಸಿದೆ ವಿಭೂಷಣರ ವಿವೇಕವಾಣಿ ಅನೇಕ ದುಃಖಗಳನ್ನು ದೂರಮಾಡಿ, ದೈವಶ್ರದ್ಧೆಯನ್ನು ಬಲಪಡಿಸಿ, ಪ್ರಸನ್ನತೆಯನ್ನು ತಂದಿದೆ. ಕಾರ್ಯ ದಕ್ಷತೆಯನ್ನು ಹೆಚ್ಚಿಸಿ ಹಿಡಿದ ಕಾರ್ಯ ಕೈಗೂಡಿಸಿಕೊಳ್ಳುವ ಶಕ್ತಿಯನ್ನು ಕಿರಿಯರಲ್ಲಿ ತುಂಬುವುದೇ ಹಿರಿಯರ ಕರ್ತವ್ಯ. ಸಂಪೂರ್ಣ ಫಲ, ಪ್ರತಿ ವ್ಯಕ್ತಿಯ ಪ್ರಯತ್ನದ ಮೇಲೆ ಅವಲಂಬಿಸಿದೆ. ಇದಕ್ಕೆ ಅನೇಕ ಪ್ರತಿಕೂಲಗಳು ಬಂದೇ ಬರುತ್ತವೆ. ಆದರೂ ನಮ್ಮ ನಿರಂತರದ ಯಥಾರ್ಥ ಪ್ರಯತ್ನ ತೃಪ್ತಿ, ಸಂತೋಷ ಮತ್ತು ಸಮಾಧಾನಗಳನ್ನು ತಂದೇ ತರುತ್ತದೆ.

ಮಕ್ಕಳಿಗೆ ಹೇಳುತ್ತಿದ್ದ ಒಂದು ನಿಜ ದೃಶ್ಯವನ್ನು ಅಂತ್ಯದಲ್ಲಿ ಮುಂದಿಡಲು ಇಚ್ಛಿಸುತ್ತೇನೆ. ಒಂದು ಸಲ ಹುಚ್ಚರ ಆಸ್ಪತ್ರೆಯ ನಿರ್ವಾಹಕರನ್ನು ಕಾಣಲು ಹೋಗಿದ್ದೆ ನೂರಾರು ಮನೋರೋಗಿಗಳು ಮನಸಾ ಇಚ್ಛೆ, ಕೋಪ ತಾಪಗಳನ್ನು ಅನಿರ್ಬಂಧವಾಗಿ ತೋರಿಸುತ್ತಿದ್ದುದನ್ನು ನೋಡಿ ದಿಗ್ಭ್ರಮೆಯಾಯಿತು. ನನ್ನ ಸಖಿ, ಒಂಟಿ ನಿರ್ವಾಹಕನ ಮೇಲೆ ಕೆಲವರು ಸೇರಿ ಬಿದ್ದರೇನು ಗತಿ ? ಎಂಬ ದಿಗಿಲು ಬಂದು ಸರಿಯಾದ ಸುರಕ್ಷತೆಯ ವ್ಯವಸ್ಥೆ ಮಾಡಿಕೊಡುವಂತೆ ಅವರಿಗೆ ಸಲಹೆ ಮಾಡಿದೆ. ಅವರು ನಗುತ್ತಾ ಹೇಳಿದರು, "ಈ ಮಾನಸಿಕ ರೋಗಿಗಳು ಒಬ್ಬರ ಜೊತೆ ಇನ್ನೊಬ್ಬರು ಸೇರುವುದೇ ಇಲ್ಲ, ಒಗ್ಗಟ್ಟು ಎಂಬುದು ಅಸಾಧ್ಯ" ಎಂದು.

ಸ್ವಾಮಿ ವಿವೇಕಾನಂದರು ಒಂದು ಶತಮಾನದ ಹಿಂದೆ ಹೇಳಿರುವ ಸುವರ್ಣ ಸೂಕ್ತಿಯನ್ನು ಸ್ಮರಿಸಿಕೊಳ್ಳುವುದು ಸೂಕ್ತ. ಮೂರು ಜನ ಭಾರತೀಯರು, ಮೂರು ದಿನ ಒಂದಾಗಿರರು, ಅದರಿಂದಲೇ ನಾವು ಹಿಂದುಳಿದಿರುವುದು.

ನಮ್ಮ ಅಸಹಿಷ್ಣುತೆ, ನಿರ್ದಯತೆ, ಸಹಕಾರ ಮನೋಭಾವದ ತೀವ್ರ ಅಭಾವ, ನಮ್ಮ ದೊಡ್ಡ ದೋಷ. ಹತ್ತು ಜನ ಕಲೆತು ಒಂದು ಸಂಸ್ಥೆಯನ್ನು ಸಮೃದ್ಧಿಪಡಿಸುವ ಕಲೆಯನ್ನು ನಾವು ಕಲಿಯಬೇಕಾಗಿದೆ ಸಂಸಾರ, ಸಂಘ, ಸಂಸ್ಥೆ, ರಾಷ್ಟ್ರಗಳ ಪ್ರಗತಿಗೆ ವ್ಯಕ್ತಿಗಳ ತ್ಯಾಗ, ಸಹನೆ ಸ್ನೇಹ, ಉತ್ಸಾಹ, ನಿಸ್ವಾರ್ಥ ದುಡಿಮೆ ಅತ್ಯಾವಶ್ಯಕ ಅಸೂಯೆ ಅಧಿಕಾರ ಲಾಲಸೆ, ಸೋಮಾರಿತನ, ಛಿದ್ರಪ್ರಿಯ ಮನೋಭಾವಗಳನ್ನು ತಡೆಹಿಡಿದು, ನಿತ್ಯ ಕಿತ್ತು ತಿನ್ನುತ್ತಿರುವ ಸಮಸ್ಯೆಗಳನ್ನು ಎದುರಿಸುವ ಕಾರ್ಯೋತ್ಸಾಹ, ಸ್ಥೈರ್ಯ ಧೈರ್ಯಗಳಿಂದ ಮುನ್ನುಗ್ಗಿ, ಪ್ರತಿಯೊಬ್ಬರು ಒಂದೊಂದು ಗುರುತರವಾದ ಗುರಿ ನಿರ್ಮಿಸಿ, ಗಂಧುಡಿಯ ಘಮ ಘಮ ಬಿಟ್ಟು, ನಿರಾಳತೆಯಿಂದ ನಿರ್ಗಮಿಸುವ ಫಲವನ್ನು ಭಗವಂತ ಕರುಣಿಸಲಿ

# ಧರ್ಮ

ಧರ್ಮ ಎಂಬ ಪದ ಎಲ್ಲರ ಬಾಯಲ್ಲೂ ಸುಲಭವಾಗಿ ಬರುವ, ಕಠಿಣ ಶಬ್ದದಿಂದ ಭಗವದ್ಗೀತೆ ಪ್ರಾರಂಭವಾಗುತ್ತದೆ.

ಪ್ರಪಂಚವನ್ನು ಒಟ್ಟುಗೂಡಿಸಿ ಸಡಿಲವಾಗದಂತೆ ಮತ್ತು ನಾಶವಾಗದಂತೆ ಮೇಲೆತ್ತಿ ಹಿಡಿದಿರುವುದು ; ಪರಮಾತ್ಮನ ಆಜ್ಞೆಯನ್ನು ಯಥಾವತ್ತಾಗಿ ಪಾಲಿಸಿ ನ್ಯಾಯವನ್ನು ನಿಷ್ಪಕ್ಷಪಾತದಿಂದ, ಸರ್ವರ ಹಿತಕ್ಕೆ ನಿಸ್ವಾರ್ಥತೆಯಿಂದ ಬಳಸುವುದು ; ನಿಯಮಿತ ಕರ್ತವ್ಯಗಳ ನಿರ್ವಹಣೆ, ಪರಹಿತಕ್ಕಾಗಿ ನಿಸ್ವಾರ್ಥ ಶ್ರಮ, ನೆರೆಹೊರೆಯವರ ಹೊಂದಾಣಿಕೆ ; ಅಲ್ಲದೆ ತನ್ನ ಜವಾಬ್ದಾರಿಗಳಿಂದ ಜಾರಿಕೊಳ್ಳದೆ ದಿಟ್ಟತನದ ನೆರವೇರಿಕೆ. ಇವು ಧರ್ಮದ ಮುಖ್ಯ ಅಂಶಗಳು. ಎಲ್ಲಾ ಕಾಲಕ್ಕೂ, ಸಮಸ್ತ ಜೀವಿಗಳಿಗೂ ಹಿತವೂ ಕ್ಷೇಮವೂ ಆದುದೇ ಧರ್ಮ. ಧರ್ಮ ಎಂಬ ಪದ ಸನಾತನ ಧರ್ಮಕ್ಕೆ ವಿಶಿಷ್ಟವಾದುದು ಬಾಕಿ ಯಾವ ಭಾಷೆಯ ಧರ್ಮ ಗ್ರಂಥದಲ್ಲೂ ಇದಕ್ಕೆ ಸಂಸಮನಾದ ಪದ ಉಪಯೋಗವಾಗಿಲ್ಲ.

ಪ್ರತಿಯೊಂದು ಜೀವಿಯೂ ಮತ್ತು ಪದಾರ್ಥವೂ ತನ್ನದೇ ಆದ ವ್ಯಕ್ತಿತ್ವವನ್ನು ಮತ್ತು ಗುಣವನ್ನು ಹೊಂದಿದೆ ಪ್ರತೀ ವಸ್ತುವಿನ ಮೂಲ ಗುಣದ ತಿರುಳು ಅಥವಾ ಗರ್ಭವೇ ಅದರ ಧರ್ಮ. ಕೇಳದೆ ಕ್ಲಪ್ತ ಕಾಲದಲ್ಲಿ, ಇಡೀ ವಿಶ್ವಕ್ಕೆ ಶಾಖ ಮತ್ತು ಬೆಳಕನ್ನು ಕೊಡುವುದು ಸೂರ್ಯನ ಧರ್ಮ. ಅಜಾಗರೂಕರನ್ನು ಸುಡುವುದು ಮತ್ತು ಸರ್ವರಿಗೂ ಶಾಖ ಕೊಡುವುದು ಬೆಂಕಿಯ ಧರ್ಮ. ನಿರಂತರ ಬೀಸಿ ನಿಷ್ಪಕ್ಷಪಾತದಿಂದ ಜೀವಿಗಳನ್ನು ಪೋಷಿಸುವುದು ಗಾಳಿಯ ಧರ್ಮ.ಜೀವಿಗಳ ಜೀವಾಧಾರವಾಗಿ,ಕೆಳಮುಖವಾಗಿ ಹರಿದು ತೇವಮಾಡುವುದು ನೀರಿನ ಧರ್ಮ. ನಿಲ್ಲದೆ ನಿರಂತರ ಸುತ್ತಿಕೊಂಡು ಸರ್ವಜೀವಿಗಳನ್ನು ಮತ್ತು ವಸ್ತುಗಳನ್ನು ಹೊತ್ತುಕೊಂಡು ಸಲಹುವುದು ಭೂಮಾತೆಯ ಧರ್ಮ. ಸುವಾಸನೆ ಬೀರಿ ತನ್ನ ಸೌಂದರ್ಯದಿಂದ ಪರರಿಗೆ ಹರ್ಷ ಬೀರುವುದು

ಪುಷ್ಪದ ಧರ್ಮ. ಚುಚ್ಚಿ ನೋವು ಮಾಡುವುದು ಮುಳ್ಳಿನ ಧರ್ಮ. ಸಾಕಿದವಂಗೆ ವಿಶ್ವಾಸ ತೋರಿ, ಪರರಿಗೆ ಮತ್ತು ಸ್ವಜಾತಿಯವರಿಗೆ ಅವಿಶ್ವಾಸ ತೋರಿ ಬೊಗಳುವುದು ಅಟ್ಟುವುದು, ನಾಯಿಯ ಧರ್ಮ. ಹೊಲಸಿನಲ್ಲಿ ಹೊರಳಾಡುವುದೇ ಹಂದಿಯ ಧರ್ಮ. ಸರ್ವರ ಹಿತ ಬಯಸಿ ಹೊಂದಿ ಬಾಳುವುದೇ ನಿಜ ಮಾನವ ಧರ್ಮ.

ಪ್ರಕೃತಿಯ ಪವಾಡ, ಸೃಷ್ಟಿಯ ಸಿದ್ಧಿ, ಕ್ರಿಯಾಶಕ್ತಿ ಅಥವ ಸಾಧನೆಗಳ ವಿಶಿಷ್ಟ ಲಕ್ಷಣಗಳನ್ನು ಏಕಾಗ್ರತೆಯಿಂದ ಪರಿಶೀಲಿಸಿದರೆ, ಧರ್ಮದ ಅರ್ಥ ಅರಿವಾಗುತ್ತದೆ. ಧರ್ಮವೇ ಪ್ರಕೃತಿ. ಪ್ರಕೃತಿಯೇ ಧರ್ಮ. ಪ್ರಕೃತಿಯ ಪ್ರತಿಯೊಂದು ಅಂಶದಲ್ಲೂ ಅನ್ಯೋನ್ಯತೆ ಆವರಿಸಿದೆ. ಪ್ರತ್ಯೇಕತೆ, ಒಂಟಿತನ ಇಲ್ಲವೇ ಇಲ್ಲ ಅದರಿಂದಲೇ ಅದರಲ್ಲಿ ಶಾಂತಿ ಸೌಂದರ್ಯ, ಶ್ರೇಯಸ್ಸು, ವರಪ್ರಸಾದ. ಚಿತ್ತಾಕರ್ಷಣೆ, ಚೆಲುವು, ಐಕ್ಯತೆ, ಕ್ಲುಪ್ತತೆ, ಧನ್ಯತೆ, ದಕ್ಷತೆ, ಮುಂತಾದ ನೈಜರೂಪದ ಶ್ರೇಷ್ಠತೆಗಳು ಶೋಭಿಸುತ್ತಿರುವುದು. ಪ್ರಕೃತಿ ಸರ್ವದಾ ಫಲಪ್ರದಾಯಕದ ಕೊಡುಗೈ. ಹೊರತು, ಕಸಿದುಕೊಳ್ಳುವುದು ಎಂದಿಗೂ ಇಲ್ಲ. ಈ ದೈವದತ್ತ ಗುಣಗಳಿಗಾಗಿಯೇ ಪ್ರಕೃತಿಯ ಒಂದೊಂದು ಅಂಶವನ್ನು ಶ್ರದ್ಧೆ ಭಕ್ತಿಯಿಂದ ಪೂಜಿಸುವುದು ; ಅಲ್ಲದೆ ಪೂಜೆ ವಸ್ತುಗಳಿಗಾಗಿ ಉಪಯೋಗಿಸುವುದು. ಪ್ರಕೃತಿಯ ವಿಚಾರವಾಗಿ ವಿಶ್ವ ವಿಜ್ಞಾನಿಗಳು ನಿರಂತರ ಸಂಶೋಧನೆಗಳಿಂದ ಅನೇಕ ತರಹದ ಸಿದ್ಧಾಂತಗಳನ್ನು ಹೊರ ತಂದಿದ್ದಾರೆ. 1970ನೇ ಸಾಲಿನಲ್ಲಿ ಅವರು ಒಂದು ತೀರ್ಮಾನಕ್ಕೆ ಬಂದರು. ಭೂಗರ್ಭದ ಕೆಳಗೆ, ಎಲ್ಲಾ ಲವಲೇಷಗಳನ್ನು, ಅಂದರೆ ವಿದ್ಯುತ್ಕಣ (ನೂಟ್ರಾನ್) ವಿದ್ಯುನ್ಮಾನ ಇಲೆಕ್ಟ್ರಾನ್) ಮತ್ತು ಮೆಸಾನ್, ಮೂರು ಸೇರಿ ಹೋಟಾನ್ ಎಂದು ನಾಮಕರಣ ಮಾಡಿರುವ ಇವು ವಿಶ್ವದ ಪ್ರತಿಯೊಂದು ಕಣಕ್ಕೂ ಸಂಬಂಧ ಹೊಂದಿದೆ ಎಂದು ನಿಶ್ಚಯಿಸಿದ್ದಾರೆ.

ಈ ಸತ್ಯವನ್ನು ಸ್ವಾಮಿ ವಿವೇಕಾನಂದರು ವಿಜ್ಞಾನ ಕೇಂದ್ರವಾದ ಚಿಕಾಗೋದಲ್ಲಿ ಒಂದು ಶತಮಾನದ ಹಿಂದೆಯೇ ಘೋಷಿಸಿದರು. ಅವರು

ಹೇಳಿದರು - ವಿಶ್ವ ಅವಿಭಾಗದ, ಅನ್ಯೋನ್ಯತೆಯು ಮತ್ತು ಪೂರ್ಣತೆಯು ಅಖಂಡತೆಯುದು. ಅದರೊಳಗಿನ ಒಂದು ಅಣು ಕೂಡಾ ಇನ್ನೊಂದು ಅಣುವನ್ನು ಅಲ್ಲಾಡಿಸದೆ ತನ್ನ ಜೋಡಿಯಲ್ಲಿ ಎಳೆದುಕೊಳ್ಳದೆ ವಿಶ್ವದ ಚಲನೆ ಅಸಾಧ್ಯ ಎಂದು.

ಪ್ರಸಿದ್ಧ ಭೌತ ವಿಜ್ಞಾನಿ ಓಟ್ರೋಕೇಪ್ ಹೇಳಿದರು - ವಿಜ್ಞಾನಿಗಳು ಬುದ್ಧನ ವಿಶ್ವ ಏಕತೆಯ ತತ್ವವನ್ನು ಅನುಸರಿಸದಿದ್ದರೆ, ನಮ್ಮ ನಾಗರೀಕತೆಯು ನಿರ್ಮೂಲ ಖಂಡಿತ ಎಂದು. ಶಂಕರರ ಮೆದುಳು ಮತ್ತು ಬುದ್ಧನ ಹೃದಯ ಒಂದಾದಾಗ ಇಡೀ ವಿಶ್ವದ ನಾಗರೀಕತೆ ಪೂರ್ಣವಾಗುತ್ತದೆ ಎಂದು ಇದನ್ನು ಹಿಂದೆಯೇ ವಿವೇಕಾನಂದರು ಹೇಳಿದರು ಬ್ರಹ್ಮಾಂಡದ ಪ್ರತಿಯೊಂದು ಬಿಡಿ ಜೀವಿಗೂ, ವ್ಯಕ್ತಿಗೂ, ವಸ್ತುವಿಗೂ ಕೀಳಲಾರದ ಸಂಬಂಧವಿದೆ ಪರಸ್ಪರಾವಲಂಬನೆ ಇದೆ. ನಿರ್ದಿಷ್ಟದ, ಕ್ಷೇಮಾಭ್ಯುದಯದ ದಾಕ್ಷಿಣ್ಯದ ಕಟ್ಟುಪಾಡು ನಿರ್ಮಿಸಿದೆ. ಇವುಗಳ ಪ್ರಾಮಾಣಿಕ ಮತ್ತು ನಿಸ್ವಾರ್ಥ ಪಾಲನೆಯೇ, ಧರ್ಮ. ವಿಶ್ವದ ಸೃಷ್ಟಿದಿಂದ ಹಿಡಿದು ಎಲೆಕ್ಟ್ರಾನ್‌ವರೆವಿಗೂ ಶಾಂತತೆ ಆವರಿಸಿದೆ. ಸೃಷ್ಟಿಗೆ ಯಾವ ಸಮಸ್ಯೆಗಳೂ ಇಲ್ಲ. ಮಾನವ, ತಾನೂ ಕೂಡಾ, ಸೃಷ್ಟಿಯ ಒಂದು ಅವಿಭಾಜ್ಯ ಏಕಾಂಶ, ಎಂಬ ತತ್ವವನ್ನು ತೃಣೀಕರಿಸಿ, ತೊಂದರೆ ಭಯ, ತಾಪತ್ರಯ, ತವಕ ಮುಂತಾದ ಸಮಸ್ಯೆಗಳಿಂದ, ತತ್ತರಿಸುತ್ತಿದ್ದಾನೆ. ಈ ಸತ್ಯವನ್ನರಿತು, ಮನಃಪೂರ್ವಕವಾಗಿ, ಪ್ರಕೃತಿಯ ಸಮಭಾಗಿಯಾಗಿ ತನ್ನ ಸಮಸ್ಯೆಗಳನ್ನೆಲ್ಲ ಅಖಂಡತೆಗೆ (ದೇವರಿಗೆ) ಅರ್ಪಿಸಿ, ಕರ್ತವ್ಯಪಾಲನೆ ಮಾಡುವುದು ಮಾನವನಿಗೆ ಶ್ರೇಯಸ್ಕರ.

ದೇವರ ನಿರೂಪಣೆ ಎಷ್ಟು ಕಷ್ಟವೋ, ಧರ್ಮದ ಸ್ಪಷ್ಟೀಕರಣ ಅಷ್ಟೇ ಕಷ್ಟ ಧರ್ಮದ ಅನೇಕ ಶಾಖೋಪಶಾಖೆಗಳನ್ನೂ ಅವುಗಳ ನಿಷ್ಕೃ-ಷ್ಟಾರ್ಥವನ್ನೂ ಸಂಪೂರ್ಣವಾಗಿ ಬರೆಯುವುದು ಅಸಾಧ್ಯ. ಜಾತಿ, ಕುಲ, ಮತ, ಸಂಪ್ರದಾಯ ಇವು ಯಾವುವು ಧರ್ಮವನ್ನು ಸ್ಪಷ್ಟೀಕರಿಸಲಾರವು. ಧರ್ಮ ಎಂಬುದರ ಅರ್ಥ ಬಹು ವಿಶಾಲ.

ಸಮುದ್ರದಷ್ಟು ಆಳವು, ಆಕಾಶದಷ್ಟು ಅಪಾರವೂ, ಅತೀ ಸಣ್ಣದಕ್ಕಿಂತ ಸೂಕ್ಷ್ಮವು, ಬಹುದೊಡ್ಡದಕ್ಕಿಂತ ಭಾರಿಯೂ, ಎಂಬುದೇ ಧರ್ಮದ ಕಲ್ಪನೆ. ಅದು ನಮ್ಮ ಸ್ವಭಾವದ ಸಾರವಾಗಿ, ನಮ್ಮನ್ನೆಲ್ಲ ಅಖಂಡತೆಯಲ್ಲಿ ಭದ್ರಪಡಿಸಿಕೊಂಡಿರುವ ಶಾಶ್ವತಸೂತ್ರ.

ರೂಢಿಯಲ್ಲಿರುವ ಈ ಕೆಲವು ಪದಗಳು ಬೆಳಕು ಚೆಲ್ಲಿ ಧರ್ಮದ ವಿವರಣೆ ನೀಡಬಹುದು.

ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಲ್ಲಿ ಧರ್ಮವೇ ಪ್ರಥಮ-ಧರ್ಮಶಾಸ್ತ್ರ, ಧರ್ಮಗ್ರಂಥ, ಧರ್ಮೋಪದೇಶ, ಧರ್ಮಪ್ರವಚನ, ಧರ್ಮಘೋಷ, ಧರ್ಮಯುಗ, ಧರ್ಮಕಾರ್ಯ, ಧರ್ಮಶ್ರದ್ಧೆ, ಧರ್ಮದೃಷ್ಟಿ, ಧರ್ಮಸೂಕ್ಷ್ಮ, ಧರ್ಮಸಂಕಟ, ಧರ್ಮಪಥ, ಧರ್ಮಬುದ್ಧಿ, ಧರ್ಮಮಾರ್ಗ, ಧರ್ಮಯುದ್ಧ, ಧರ್ಮಪದ್ಧತಿ, ಧರ್ಮನಿಷ್ಠೆ, ಧರ್ಮಿ, ಧರ್ಮಾತ್ಮ, ಧರ್ಮದರ್ಶಿ, ಧರ್ಮಶೀಲ, ಧರ್ಮವಿರೋಧಿ, ಧರ್ಮಪ್ರಚಾರಕ, ಧರ್ಮಪತ್ನಿ, ಧರ್ಮದ್ರೋಹಿ, ಧರ್ಮಭ್ರಷ್ಟ, ಧರ್ಮಾಂಧ, ಧರ್ಮಘಾತುಕ, ಧರ್ಮಛತ್ರ, ಧರ್ಮಶಾಲೆ, ಮುಂತಾದುವು.

ಧರ್ಮ, ಸಂಸ್ಕೃತಿ, ಸತ್ಯ, ಪರ್ಯಾಯ ಶಬ್ದಗಳು. ನಮ್ಮ ಕಾರ್ಯಕಲಾಪಗಳಲ್ಲಿ ಸತ್ಯನಡವಳಿಕೆಯೇ ಧರ್ಮ. ಎಂಥಾ ಕಷ್ಟ ಅಥವ ಮಾನ ಪರೀಕ್ಷೆಯ ಸಮಯಗಳಲ್ಲೂ ಆತ್ಮಗೌರವ ಕಾಪಾಡಿಕೊಳ್ಳುವುದೇ ಶ್ರೇಷ್ಠ ಧರ್ಮ. ಸತ್ಯವಂತನೇ ಧರ್ಮಾತ್ಮ. ಧರ್ಮಾತ್ಮನೇ ಸತ್ಯವಂತ. ಸುಸಂಸ್ಕೃತನೇ ಸತ್ಯವಂತ ಅಥವ ಧರ್ಮಾತ್ಮ. ವಿಶ್ವದ ಇತಿಹಾಸದಲ್ಲಿ ಧರ್ಮವನ್ನು ಅನುಸರಿಸಿ, ಕೀರ್ತಿ ಮತ್ತು ಜಯಗಳಿಸಿರುವವರ ಮೇಲ್ಪಂಕ್ತಿಯನ್ನು ಅನುಸರಿಸುವುದು ಧರ್ಮ ಪರಿಪಾಲನೆಯ ಮಾರ್ಗ. ಮನುಷ್ಯ ತನ್ನೊಡನೆ ಇತರರು ಹೇಗೆ ವ್ಯವಹರಿಸಬೇಕೆಂದು ಇಷ್ಟಪಡುತ್ತಾನೋ, ಹಾಗೆಯೇ ಇತರರೊಡನೆ ನಡೆದುಕೊಳ್ಳುವುದು ಮಾನವಧರ್ಮ, ಕ್ರೌರ್ಯವಿಲ್ಲದಿರುವುದು ಶ್ರೇಷ್ಠಧರ್ಮ. ವಿಶ್ವಶಾಂತಿ ಭಾರತೀಯಧರ್ಮ.

ಮನು ತಿಳಿಸಿರುವ ಹತ್ತು ಧರ್ಮಾತ್ಮರ ಲಕ್ಷಣಗಳು-ಧೈರ್ಯ ಕ್ಷಮೆ, ದಾನ, ಕಾಯ ವಾಚ ಮನಸಾ, ಕಳ್ಳತನ ಮಾಡದೇ ಇರುವುದು, ಅತಃ ಬರ್ಹಿ ಶುದ್ಧತೆ, ಇಂದ್ರಿಯಾ ನಿಗ್ರಹ, ವಿವೇಚನೆ, ಸತ್ಯ, ವಿದ್ಯೆ, ಕೋಪದ ಹತೋಟಿ. ಮಹಾತ್ಮಗಾಂಧಿಯವರು ಅಹಿಂಸೋ ಪರಮೋಧರ್ಮವನ್ನು ಹನ್ನೊಂದನೆಯದಾಗಿ ರೂಢೈಸಿ ಮಹಾತ್ಮರಾದರು. ಈಶ್ವರಾಜ್ಞೆಯ ಉಲ್ಲಂಘನೆ, ಪಕ್ಷಪಾತ, ಅನ್ಯಾಯ, ಸ್ವಾರ್ಥ, ಅವಿದ್ಯೆ, ಹಠ, ಕ್ರೌರ್ಯ, ನಾಸ್ತಿಕತೆ, ಪರನಿಂದೆ, ದ್ವೇಷ, ಈರ್ಷ್ಯೆ, ಡಂಭ, ಅಹಂಕಾರ, ಅಭಿಮಾನ, ಕ್ರೋಧ, ಕಠೋರತೆ,-ಅಧರ್ಮಿಯ ಲಕ್ಷಣಗಳು.

ಹುಚ್ಚ, ಮದಮತ್ತ, ಉನ್ಮಾದಿ ಕೋಪಿಷ್ಟ, ಆಯಾಸಿ, ಹಸಿದವನು, ಆತುರಗಾರ, ಲೋಭಿ, ಭೀತಿ, ಕಾಮಿ, ಈ ಹತ್ತು ಜನ ಧರ್ಮವನ್ನು ಅರಿಯರು.

ಧರ್ಮವನ್ನು ಅನುಸರಿಸಿದರೆ ಅದು ನಮ್ಮನ್ನು ಸಲಹುವುದು-ಧರ್ಮ ಮೀರಿದರೆ ಅದು ನಮ್ಮನ್ನು ನಾಶಪಡಿಸುವುದು (ಮನುಸ್ಮೃತಿ) ಧರ್ಮ ನಿರತರಿಗೆ, ಸದಾ ಶುಭ ಸಂಪತ್ತುಗಳು ಲಭಿಸುತ್ತವೆ (ಕಾದಂಬರಿ).

ಅಧರ್ಮದಿಂದ ಗಳಿಸಿದ ದ್ರವ್ಯವು ಅಲ್ಪಕಾಲ ಇರುವುದು. ಅನಂತರ ಶತೃಗಳ ವಶವಾಗುವುದು. ಬೇರುಸಹಿತ ನಾಶವಾಗುವರು (ಸುಭಾಷಿತ) ಅಧರ್ಮಿಗೆ ಮೊದಮೊದಲು ಏಳಿಗೆ ಕಾಣುವುದು. ಶುಭವು ಮತ್ತು ಶತ್ರು ಜಯವು ದೊರೆಯುವುದು. ಕೊನೆಗೆ ಸಂಪೂರ್ಣನಾಶ ಖಂಡಿತ.

ನಮ್ಮ ಎಲ್ಲಾ ಧರ್ಮಗ್ರಂಥಗಳು ಸತ್ಯಧರ್ಮಗಳ ಕೈಪಿಡಿ. ಪ್ರಾಮುಖ್ಯವಾಗಿ ಅಮರಕವಿಗಳಾದ, ವಾಲ್ಮೀಕಿ ಮತ್ತು ವ್ಯಾಸರು ರಚಿಸಿರುವ ರಾಮಾಯಣ ಮತ್ತು ಮಹಾಭಾರತಗಳು ಧರ್ಮದ ನಿಘಂಟು.

ರಾಮ, ಧರ್ಮ, ಸತ್ಯ ಮತ್ತು ಸಂಸ್ಕೃತಿಯ ಮೂರ್ತಿಸ್ವರೂಪ. ಅವನ ಅದ್ಭುತ ಆದರ್ಶವನ್ನು ಅಲಕ್ಷಿಸಿ ಅವನ ಅನಿಶ್ಚಿತ ಜನ್ಮಸ್ಥಾನಕ್ಕಾಗಿ ಜಂಜಾಟ ನಡೆಸುತ್ತಿರುವುದು ವಿಷಾದಕರ ಮತ್ತು ವಿನಾಶಕಾರಿ.

ಕುವೆಂಪು ರಾಮಾಯಣ ದರ್ಶನದಿಂದ ಧರ್ಮದ ವಿಚಾರವಾಗಿ ಕೆಲವು ಉದಾಹರಣೆಗಳನ್ನು ಕೊಡಲಾಗಿದೆ.

ವನವಾಸಕ್ಕೆ ಹೊರಡುವ ಮುನ್ನ ರಾಮ ಲಕ್ಷ್ಮಣನಿಗೆ ಹೇಳಿದ್ದು
"ನನಗೆ ಧರ್ಮಮಂ ಬಿಟ್ಟನ್ಯ ಸಿರಿಯಿಲ್ಲ.
ಧರ್ಮ ಸಹಿತಂ ವಿಪಿನಮರಮನೆ ;
ಧರ್ಮ ರಹಿತಮೀ ರತ್ನಮಯ ರಾಜಸೌಧಂ
ಶ್ಮಶಾನಕೆ ಮಿಗಿಲ್ ಭೀಕರಂ."
ಕೌಸಲ್ಯೆ ಮಗನಿಗೆ ಕೊಟ್ಟ ಆಶೀರ್ವಾದ
"ನೀನಾವ ಧರ್ಮಮಂ ಗುರಿಗೆಯ್ದು ಹೊರಟಿಹೆಯೊ
ಆ ಧರ್ಮ ದೇವತೆಯೆ ರಕ್ಷೆಯಾಗಲಿ ನಿನಗೆ."

ರಾಮ ಸೀತೆಯನ್ನು ವನವಾಸಕ್ಕೆ ಬರುವುದು ಬೇಡ ಎಂದಾಗ, ಸೀತೆ ರಾಮನಿಗೆ ಹೇಳಿದ್ದು
"ರಾಮನರ್ಧಾಂಗಿ ಸೀತೆಗೆ ಬೇರೆತನವಿಲ್ಲ
ಪತಿಯ ಸುಖ-ದುಃಖದರ್ಧಂ ಸತಿಗೆ."
ಪತಿಸೇವೆಗಿಂ ಮಿಗಿಲ್ ಸೇವೆಯಿಲ್ಲಂಗನೆಗೆ
ರಾಜರ್ಷಿ ತಂದೆಯುಂ, ಗುರುಗಳುಂ,
ಧರ್ಮಮಂ ಬೋಧಿಸಿಹರೆನಗೆ."

ರಾಮ ಭರತನಿಗೆ...
"ಧರ್ಮ ದೇವತಾ ಕ್ರೌರ್ಯಕ್ಕೆ ಕರುಣೆಯಲ್ಲದೆ
ಬೇರೆ ಗುರಿಯಿಹುದೆ ? ಕಿರಿಯ ತಾಯ್
ನಿಯತಿ ಹಸ್ತದೊಳೊಂದು ಕೈದು ತಾಂ."
"ಪಿತೃವಾಕ್ಯ ಪರಿಪಾಲನಾರ್ಥಮಾಂ ವನವಾಸಿ
ಪದಿನಾಲ್ಕು ಬರಿಸಂಬರಂ, ತಂದೆ ತೀರ್ದೊಡೇಂ
ತೀರ್ದುದೆ ತಂದೆಯಾಜ್ಞೆ ? ತಂದೆಗಿಂ
ಪೆರ್ತಂದೆ ದಲ್ ಧರ್ಮಂ ; ಚಿರಂಜೀವಿ ಮೇಣ್."

ಮಾರೀಚ ರಾವಣನಿಗೆ...

"ಧರ್ಮವರ್ಮವೆ ರಕ್ಷೆಯಾದತನಂ ಧರ್ಮದಿಂದಲೇ
ಜಯಿಸವೇಳ್ಕು ಮೆಂದಾನಿಂತು ತಪಕೆ ನೋಂತೆಂ"

ವಾಲಿಗೇ ಆಂಜನೇಯ...

"ಹೇ ಕಪಿವೀರ, ವೈರದಿಂ ಧರ್ಮ ಸಾಧನೆಯಾಗದೈ,
ನಂಬೀ ಸೋದರನ ನುಡಿಗಳಂ."

ರಾವಣನ ಸಭೆಯಲ್ಲಿ ಹಿರಣ್ಯಕೇಶಿ ..

"ಭಯಂ ವೈರಿಯಿಂದಲ್ತು ; ಧರ್ಮ ಮುನಿಸಿನೊಂದಳ್ಕು
ಕಲಕುತಿದೆ ಪುರ್ಧೈರ್ಯಮಂ, ಬರಿಯ ಸೈನ್ಯ ಬಲಮಂ
ನೆಮ್ಮಿ ಲಂಕೆಯಂ ಪಾಳ್ಗಿಡಿಪುದನು ಚಿತಂ. ಧರ್ಮಮಂ.
ಕೆರಳಿಸುವ ಕಾರಣಮನುಳಿಯುಮಂ. ಅನಂತರಂ
ಬರಲಿ ನೋಳ್ಪಂ ಮೂರು ಲೋಕಗಳ್ ನಮಗಿದಿರೆ ?
ನಮ್ಮೊಳೊಪಂಗಿದರೆ ? ಶೌರ್ಯಪಿಸಿ ಈ ಲಂಕೆ ;
ಋತದ ರೋಷವನುಳಿಯಲನ್ಯ ವೈರಿಯ ಶಂಕೆ ತನಗೆ ತೃಣಮಿಲ್ಲ.
"ಧರ್ಮ ದೇವತಾ ಕೋಪಮಂ ಪ್ರತಿಘಟಿಸಿ ಗೆಲ್ದಿರಾರುಂ"

ಆಂಜನೇಯ ಅಯೋಧ್ಯೆ, ಲಂಕೆ ಮತ್ತು ಕಿಷ್ಕಿಂದೆ ರಾಜಧಾನಿಗಳ ನಾಗರೀಕತೆಯನ್ನು ರಾಜರ ಸಂಸ್ಕೃತಿಯನ್ನು ಬಹು ಸ್ವಾರಸ್ಯವಾಗಿ ವಿವರಿಸಿದ್ದಾನೆ. ಲಂಕೆ ಮತ್ತು ಕಿಷ್ಕಿಂದೆಗಳು ಬಹು ಬಲಿಷ್ಟರಿಂದ ಕೂಡಿದ್ದರೂ, ದೊರೆಗಳು ಧರ್ಮರಹಿತರಾದ್ದರಿಂದ ಸಂಪೂರ್ಣ ಜನಸಮೂಹ ತಮ್ಮ ಶಾಂತಿ ಸೌಭಾಗ್ಯಗಳನ್ನು ಹಾಳು ಮಾಡಿಕೊಂಡರು. ದೊರೆ ದೋಷಾತ್ಮಕನಾದರೆ ಪ್ರಜೆ ಪಾವನನಾಗಲಾರ. ಪ್ರಜಾ ಪ್ರತಿನಿಧಿ ಅನೀತಿವಂತನಾದರೆ, ಜನ ನಿಜವಂತರಾಗಲಾರರು.

ಮಹಾಭಾರತ ಐದನೆಯ ವೇದವೆಂದು ಪ್ರಖ್ಯಾತಿ ಪಡೆದಿದೆ. ಇದು ಸನಾತನ ಧರ್ಮದ ಕೈಪಿಡಿ. ಇದರ ಕಥನ ಜೀವನದ ಪ್ರತಿಬಿಂಬ.

ಮಾನವ ಕಾರ್ಯಸಾಧನೆ ಕಾರ್ಯಶಕ್ತಿ ಮತ್ತು ಹೆಗ್ಗುರಿಗಳ ಅಧ್ಭುತ ದಾಖಲೆ. ಈ ಇತಿಹಾಸದಲ್ಲಿ ಬಗೆಬಗೆಯ ಘನ ಗಂಭೀರತೆಯಿಂದ ಹಿಡಿದು, ಹಾಸ್ಯಾಸ್ಪದವಾದ, ಮಾನವ ಗುಣಗಳ ಪ್ರದರ್ಶನವಿದೆ ವಿವಿಧ ಮಾನವ ವಿಕಾರ ಭಾವಾವೇಶ, ಪರಾಕ್ರಮ, ತ್ಯಾಗ, ಸಮರ್ಪಣೆ ಜೊತೆಗೆ ಅತಿತುಚ್ಛವಾದ ಗುಣವರ್ಣನೆಗಳು ವಿಪುಲವಾಗಿವೆ. ಈ ಮಹಾಕಾವ್ಯದಲ್ಲಿ ಅಂದು ವರ್ಣಿಸಿರುವ ಅರಿಷಡ್ವರ್ಗಗಳ ನಗ್ನನರ್ತನ ಇಂದು ನೂರ್ಮಡಿಯಾಗಿ ನಲಿಯುತ್ತಿವೆ. ಅತ್ಯಾಸೆ ಲೋಭಗಳಿಂದ ಅಂಧರಾದ ಕೌರವರಿಗೆ ಧರ್ಮದ ಅರಿವು ಮತ್ತು ಜನ ಅಪವಾದದ ಭಯ ಮಾಯವಾಗಿತ್ತು. ಭಿನ್ನಮಾರ್ಗಿಯ ಧುರ್ಯೋಧನ ಸಮರದಿಂದ ಸ್ವರ್ಗ ಬಯಸಿದ. ಶ್ರೀ ಕೃಷ್ಣನ ಸೇನಾಬಲ, ಸಾಮಗ್ರಿಗಳಿಂದ, ಸಂತೋಷ ಸಾಗರದಲ್ಲಿ ಈಜಾಡಿದ ಸಮರ ಶಕ್ತಿಗಳಿಗೆ, ಐಹಿಕ ಐಶ್ವರ್ಯಗಳಿಗಾಗಿ ಓಲಾಡಿದವರೆಲ್ಲ ಅವುಗಳ ಜೋಡಿಯಲ್ಲೇ ಜಜ್ಜಿಹೋಗುತ್ತಾರೆ. ಎಂಬ ನಗ್ನ ಸತ್ಯವನ್ನು ಕೌರವರು ತೋರಿದ್ದಾರೆ. ಯುದ್ಧ, ಹೋರಾಟ, ಘರ್ಷಣೆ, ಕಿತ್ತಾಟ ಬಡಿದಾಟ, ವೈರಸಾಧನೆ ಇವುಗಳಲ್ಲಿ ನಂಬಿಕೆ ಇಟ್ಟುಕೊಂಡು, ವಿವೇಚನಾ ರಹಿತರಾಗಿ, ಹಠಮಾರಿತನದಿಂದ ವರ್ತಿಸುವವರು, ತಾವೇ ಅಲ್ಲದೆ ತಮ್ಮ ಪರ ಸೇರಿದವರ ಜೋಡಿಯಲ್ಲಿ ಸರ್ವನಾಶಕ್ಕೆ ಬಲಿಯಾಗದೆ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಇದು ಮತ, ಸಂಸಾರ, ಸಮಾಜ, ರಾಷ್ಟ್ರ, ಅಂತರರಾಷ್ಟ್ರ ಎಲ್ಲರಿಗೂ ಅನ್ವಯಿಸುವ ಸತ್ಯ.

ಧರ್ಮರಾಯ (ಯುಧಿಷ್ಠಿರ) ಪಾಂಡವ ಜೇಷ್ಠ, ಧರ್ಮದ ಸ್ವರೂಪ. ಸಾತ್ವಿಕದ ಪಡಿಯಚ್ಚಿನ ಪಾಂಡವರು, ತಮ್ಮ ಹಕ್ಕಿನ ಅರ್ಧ ರಾಜ್ಯ ನಿರಾಕರಿಸಲ್ಪಟ್ಟಾಗ, ಯುದ್ಧ ತಪ್ಪಿಸಿ ಶಾಂತಿ ಬಲಗೊಳಿಸಲು ಐದು ಹಳ್ಳಿಗಳನ್ನು ಕೊಟ್ಟರೆ ತೃಪ್ತರೆಂದ, ಶ್ರೀಕೃಷ್ಣ ಮಹಾಪುರುಷರು. ಮಹಾಭಾರತ ದುರಂತಕ್ಕೆ ಕಾರಣನಾದ ದೊರೆ ಧೃತರಾಷ್ಟ್ರ, ಪಕ್ಷಪಾತದ ಅವತಾರಿ ದುರಾಹಂಕಾರಿ ಮತ್ತು ದುರ್ಮಾರ್ಗಿ, ಜೇಷ್ಠ ಕೌರವ - ಧುರ್ಯೋಧನ, ಪಾಂಡವರಿಗೆ ಮಾಡಿದ ಅನ್ಯಾಯ, ಅಪಚಾರ, ಆಘಾತಗಳಿಗೆಲ್ಲಾ, ತಂದೆಯಾದ ದೊರೆ, ಧೃತರಾಷ್ಟ್ರ ಪರೋಕ್ಷವಾಗಿ ಪುಷ್ಟಿ

ಕೊಟ್ಟು, ಈ ತಂದೆ ಮಕ್ಕಳು ಪ್ರಪಂಚ ಮರೆಯಾದಂತ ಒಂದು ನಿರ್ದಿಷ್ಟ ದೃಷ್ಟಾಂತವನ್ನು ಸೃಷ್ಟಿಸಿದ್ದಾರೆ.

ಈ ಶ್ರೇಷ್ಠ ಇತಿಹಾಸವು, ರಾಜಧರ್ಮದ ನಿಘಂಟು "ಯಥಾರಾಜ ತಥಾ ಪ್ರಜಾ." ರಾಜಕೀಯ, ದೇಶದ ಪ್ರತಿಯೊಂದು ವಿಭಾಗ ಅಥವ ಅಂಶದ ಮೇಲೂ ತನ್ನ ಪರಿಣಾಮವನ್ನು ಬಿಡದೆ ಬೀರುತ್ತದೆ. ಪ್ರತಿಯೊಬ್ಬ ವ್ಯಕ್ತಿಯ ಮೇಲೂ ಪ್ರಭಾವವನ್ನು ತಪ್ಪದೆ ಒತ್ತುತ್ತವೆ ಉಚಿತ ಅಥವ ಅನುಚಿತ ನೈತಿಕ ಮೌಲ್ಯಗಳ, ಪ್ರಚೋದನೆ ರಾಷ್ಟ್ರ ಪ್ರಗತಿಗೆ ಅಥವ ಪತನಕ್ಕೆ ಕಾರಣವಾಗುತ್ತವೆ. ಸಾಮಾಜಿಕ, ಆರ್ಥಿಕ, ನೈತಿಕ, ವಿಜ್ಞಾನ, ಕಲೆ, ಸಂಸ್ಕೃತಿ, ನಾಗರೀಕತೆ, ಶಾಂತಿ,ಪ್ರತಿಯೊಂದು ಮಾನವ ಸಂಬಂಧಗಳು ರಾಜಕೀಯ ರಂಗಿನಿಂದ ಚಿತ್ರಿಸಲ್ಪಡುತ್ತವೆ

ಒಂದು ದೇಶದ ಶಾಂತಿಯನ್ನು ಘನೀಕರಿಸಿ ಅಭಿವೃದ್ಧಿಗೊಳಿಸುವುದು ಅಥವ ಸಂಕ್ಷೋಭೆ ಸೃಷ್ಟಿಸಿ, ವಿನಾಶಕರವಾದ ಸಮರಕ್ಕೆ ನೂಕುವುದು, ಆಳುವ ರಾಜನ ಅಥವ ರಾಜಕೀಯಸ್ಥನ ಕೈಯಲ್ಲಿದೆ. ಯಾರು ಎಲ್ಲಾ ಸಂದರ್ಭಗಳಲ್ಲೂ, ಸತ್ಯ, ಧರ್ಮ, ನೀತಿ, ಘನತೆ, ಗಂಭೀರತೆ, ಸಮತೆ ಮತ್ತು ಉದಾತ್ತತೆಯನ್ನು ಪ್ರದರ್ಶಿಸುತ್ತಾನೋ ಅವನೇ ರಾಜನೆಂಬ ಬಿರುದಿಗೆ ಅರ್ಹ. ಪ್ರಜಾಪ್ರಭುತ್ವದಲ್ಲಿ, ನಾಯಕನ ಪಾತ್ರ ಬಹು ವ್ಯಾಪಕವಾದುದು, ವಿಶೇಷ ಪರಿಣಾಮಕಾರಿಯಾದುದು ಮತ್ತು ನಿರ್ಣಯಕಾರಿಯಾದುದು. ಸತ್ಯ, ಧರ್ಮ, ನೀತಿಗಳೆ ಅಗ್ರಗಣ್ಯನ ಆಸರೆ ಮತ್ತು ನಿಯಂತ್ರಕ ಆದರ್ಶಗಳು. ಆ ದಾರಿದೀಪಗಳನ್ನು ಹಿಂಬಾಲಿಸಿ ಪರರಿಗೆ ಮಾರ್ಗದರ್ಶಿಗಳಾಗಬೇಕು. ವಿಶ್ವದಾದ್ಯಂತ, ಕೀರ್ತಿ ಕಿರೀಟ ದಾರಿಗಳು, ವಿಜಯಶಾಲಿಗಳೆಲ್ಲ, ಶ್ರೇಷ್ಟ ಶೀಲವಂತರಾಗಿ ಮಡಿಬಾಳ್ವೆ ನಡೆಸಿರುವುದನ್ನು ಇತಿಹಾಸ ಸ್ಪಷ್ಟಪಡಿಸಿದೆ.

ರಾಮಾಯಣ ದರ್ಶನದಲ್ಲಿ ಕುವೆಂಪು ಅವರು ಪ್ರಜಾಪ್ರಭುತ್ವ ಉಳಿವಿಗೆ ದೊರೆ ದಶರಥ ಮತ್ತು ರಾಜಕುಮಾರ ಶ್ರೀರಾಮನ ಶೀಲಸ್ವಭಾವ ವರ್ಣನೆಯ ಮೂಲಕ ಪ್ರಜಾ ನಾಯಕನ ಆದರ್ಶಗಳನ್ನು ಅರ್ಥಗರ್ಭಿತವಾಗಿ ಚಿತ್ರಿಸಿದ್ದಾರೆ.

ಚಕ್ರವರ್ತಿಯಾದಕ್ಕೆ ದಶರಥಂ ..

"ರಾಜರ್ಷಿಯೂ ದೀರ್ಘದರ್ಶಿಯೂ ಸಮದರ್ಶಿತಾಂ
ಜನ್ಮ ಕುಲ ಧನ ಜಾತಿ ವರ್ಣ ಪ್ರಭೇದವಂ
ಗಣಿಸದಯೆ, ಮನದ ಹೃದಯದ ಧರ್ಮ ಕರ್ಮವನೆ
ಹಿಡಿದು ಮನ್ನಣೆ ಮಾಡಿ, ನೀಚೊಚ್ಚ ಭಿನ್ನವಂ
ಸ್ಪರ್ಧೆ ವೈರಗಳಂ ತೊಡೆದು ಸಮಬುದ್ಧಿಯಿಂ
ದರ್ಪದಿಂ ಪಾಲಿಸಿರ್ದನು ತನ್ನ ರಾಜ್ಯಮಂ
ಸರ್ವ ಪ್ರಜಾಮತಕೆ ತಾನು ಪ್ರತಿನಿಧಿಯೆಂಬ
ಮೇಣವರ ಹಿತಕೆ ಹೊಣೆಯೆಂದೆಂಬ ಬುಧರೊಲಿದ
ಸಮದರ್ಶನವನೊಪ್ಪಿ"

"ಜನಮನವೆ ಯುಗಶಕ್ತಿಯಲ್ತೆ ?"

ಶ್ರೀರಾಮನ ಗುಣ ವಿಶೇಷ
"ಪ್ರಿಯಭಾಷಿ, ಹಿತಸಖಂ, ಮಿತಮಾರ್ಗಿ, ಧೀರವಶಿ
ನಗುಮೊಗದ ಸಂಯಮಿ ಕೃತಜ್ಞತಾ ಮೂರ್ತಿ. ಮೇಣ್
ಜಿಜ್ಞಾಸಿ, ಸಜ್ಜನಪ್ರೇಮಿ, ಸೂಕ್ಷ್ಮಮತಿ ಪಂಡಿತಂ ಶ್ರುತಿವಿದಂ
ಸುವಿಚಾರಿ, ನಿತ್ಯಂಪ್ರಜಾಪ್ರೇಮಿ."

ಮಹಾತ್ಮ ಗಾಂಧಿಯವರು ಜನನಾಯಕನನ್ನು ಶ್ರೇಷ್ಠ ಸತ್ಯಾಗ್ರಹಿ ಎಂದು, ಅವನಿಗಿರಬೇಕಾದ ಗುಣಗಳನ್ನು ಈ ರೀತಿ ವರ್ಣಿಸಿದ್ದಾರೆ.

ಸತ್ಯ, ಅಹಿಂಸೆ—ಮಾನವ ಸಹಜ ಸಜ್ಜನತೆಯ ಶ್ರದ್ಧೆ—ಮಡಿಯಾದ ಬಾಳ್ವೆ—ಆದರ್ಶಕ್ಕಾಗಿಪ್ರಾಣ ತ್ಯಾಗ—ಕೋಪ ವರ್ಜನೆ—ಸಹನೆ—ಪ್ರತಿಕಾರಕ್ಕೆ ಬದಲಾಗಿ ಪ್ರತ್ಯುಪಕಾರ—ನಿರ್ಭಯ—ಆತ್ಮ ಗೌರವ ಮತ್ತು ಅನುಯಾಯಿಗಳ ರಕ್ಷಣೆ.

ರಾಜಧರ್ಮ ನೀತಿವಿಕಾರತೆಯಿಂದ ರೋಗಗ್ರಸ್ಥವಾಗಿ, ಸಂಸಾರ, ಸಮಾಜ ಅಲ್ಲದೆ ಇಡೀ ರಾಷ್ಟ್ರವೇ ಅಸ್ವಸ್ಥತೆಯು, ಸ್ಥಿತಿಯನ್ನು ಅನುಭವಿಸುತ್ತಿರುವುದನ್ನು ನೋಡುತ್ತಿದ್ದೇವೆ. ಮುಂದಿನ ಪೀಳಿಗೆಯು, ಹಿತದೃಷ್ಟಿಯಿಂದ, ನಮ್ಮ ಮೂರು ಸಾವಿರ ವರ್ಷಗಳ ಇತಿಹಾಸ ಉಳ್ಳ ಭಾರತ ಭೂಮಿಯ ಪಕ್ಷಿನೋಟ, ಉಪಯುಕ್ತ. ಅದು ಈಗಿನ ಆಫ್‌ಘಾನಿಸ್ಥಾನ್, ನೇಪಾಳ್, ಭೂತಾನ್, ಶ್ರೀಲಂಕಾ, ಬರ್ಮ, ಥೈಲಾಂಡ್, ಮಲೆಯು, ಇಂಡೋನೇಷಿಯ, ಇಂಡಿಯಾ. ಪಾಕಿಸ್ಥಾನ್ ಮತ್ತು ಬಂಗ್ಲಾದೇಶಗಳನ್ನು ಒಳಗೊಂಡಿತ್ತು. ಎಂದೂ ಇವೆಷ್ಟು ಒಬ್ಬನ ಚಕ್ರಾಧಿಪತ್ಯಕ್ಕೆ ಒಳಗಾಗಿರಲಿಲ್ಲ. ಕ್ರಿ.ಪೂ 150 ರ ಸುಮಾರಿಗೆ ಆರ್ಯರು ಇಂಡಸ್ ಕಣಿವೆ ನಾಗರೀಕತೆ ಬೆಳಗಿಸಿರುವುದನ್ನು, ರಾಮಾಯಣ ಮಹಾಭಾರತಗಳು ವಿಶದಪಡಿಸುತ್ತವೆ. ಕಿ.ಪೂ. 500 ರಲ್ಲಿ ಬೌದ್ಧಮತ, ರಾಜಕೀಯ ಶಕ್ತಿಯಾಗಿ, ತನ್ನ ಪ್ರಭಾವವನ್ನು ಈಗಿನ ಆಗ್ನೇಯ ಏಷಿಯಾ, ಚೈನಾ, ಟಿಬೆಟ್, ಭೂತಾನ್, ಸಿಕ್ಕಿಂ, ಶ್ರೀಲಂಕಾ ಮತ್ತು ನೇಪಾಳ್ ದೇಶಗಳ ಮೇಲೆ ಬೀರಿತು. ಎಂಟನೇ ಶತಮಾನದ ವೇಳೆಗೆ ಮುಹಮ್ಮದೀಯರ ಆಕ್ರಮಣ ಆರಂಭವಾಗಿ, ಹದಿನೆಂಟನೇ ಶತಮಾನದಲ್ಲಿ ಮೊಗಲ್ ಸಾಮ್ರಾಜ್ಯ ಛಿದ್ರವಾಯಿತು. ರಾಜಪುತ್ರರ, ಮರಾಟಿಯುವರ, ಸಿಕ್ಕರ ಒಳಜಗಳದಿಂದ, ಹೊರಗಿನವರ ಆಕ್ರಮಣ ಹಗುರವಾಯಿತು. ಡೆಲ್ಲಿಯಿಂದ ಕೇಂದ್ರಿಕೃತವಾದ ಆಡಳಿತ, ಅಧಕ್ಷವಾಗಿತ್ತು ಅದರ ಫಲ, ನೂರಾರು ಸಣ್ಣಪುಟ್ಟ ರಾಜ್ಯಗಳು ಉದಯವಾದವು. ಮೊಗಲರ ಕಾಲದಲ್ಲಿ ಪೋರ್ಚುಗೀಸರು, ಡಿಯೂ ಮತ್ತು ಡಾಮನ್ (ಗೋವಾ); ಬ್ರಿಟಿಷರು ಮದ್ರಾಸನ್ನೂ ಮತ್ತು ಫ್ರೆಂಚರು ಪಾಂಡಿಚೆರಿಯನ್ನು ಆಕ್ರಮಿಸಿಕೊಂಡರು. 1757 ರಲ್ಲಿ ಸಂಭವಿಸಿದ ಪ್ಲಾಸಿ ವಿಜಯದಿಂದ ಬ್ರಿಟಿಷರು ಸಂಪೂರ್ಣ ಇಂಡಿಯಾ ದೇಶದ ಅಧಿಪತಿಗಳಾದರು. 556 ರಾಜರುಗಳು ಇಂಗ್ಲಿಷರ ಕಾಲಾಳುಗಳಾದರು. ಗುಲಾಮ್ ಗುಮಾಸ್ತರನ್ನು ಹೊಂದಲು ಇಂಗ್ಲೀಷ್ ಭಾಷೆ ಪ್ರಚುರಪಡಿಸಿದರು. ದೇಶದ, ಮೂಲ ಸಾಮಗ್ರಿಗಳನ್ನು,

ಇಂಗ್ಲೆಂಡಿಗೆ ಸಾಗಿಸಿ, ಅಲ್ಲಿ ತಯಾರುಮಾಡಿದ, ನಿತ್ಯ ಬಳಕೆಯ ಪದಾರ್ಥಗಳನ್ನು, ದೇಶಾದ್ಯಂತ ಮಾರಾಟ ಮಾಡಿ, ಸ್ಥಳೀಯ ಕೈಗಾರಿಕೆಗಳನ್ನು. ಸಂಪೂರ್ಣವಾಗಿ ನಾಶಮಾಡಿದರು. ದೇಶ, ದಾರಿದ್ರ್ಯದ ದುಗುಡ ಮತ್ತು ದುರ್ಭಿಕ್ಷೆಯ ದುಃಸ್ಥಿತಿಗೆ ದೂಡಲ್ಪಟ್ಟಿತು. ಪರಕೀಯರಿಗೆ ಪಲ್ಲಕ್ಕಿ ಹೊರುವ ಪರಿಚಾರದವರಾದೆವು. ಮೋಜಿನ ಕಾಲಿನಿಂದ ತೋರಿದ್ದನ್ನು ಮರುಮಾತಿಲ್ಲದೆ ಸಂವತ್ಸರಗಳ ಕಾಲ ಮಾಡಿದೆವು.

ಗುಲಾಮಗಿರಿಯ ಕಷ್ಟನಷ್ಟ ಅವಮಾನ. ನಿರ್ಲಕ್ಷ್ಯತೆ, ನಿಷ್ಕರುಣೆ, ನಿಷ್ಠುರತೆ, ಕ್ರೂರತೆ, ಜಿಗುಪ್ಸೆಯ ಜೀವನದ ಕರಾಳ ದಿನಗಳನ್ನು, ಯುವಕರು ನಿತ್ಯ ಜ್ಞಾಪಿಸಿಕೊಳ್ಳಬೇಕು ಮೋಹಿನಿ ಅವತಾರದ ಪರಕೀಯರು ಭಾರತೀಯರ ಮೇಲೆ, ನಡೆಸಿದ ಎರಡು ಶತಮಾನಗಳ ಅಕ್ಷಮ್ಯ ಬಂಡಾಟ, ಪುಂಡಾಟ ಮತ್ತು ಟಕ್ಕುತನಗಳನ್ನು, ಮಾತೆಯರು ಮಕ್ಕಳಿಗೆ, ಕತೆ ರೂಪದಲ್ಲಿ ಬೋಧಿಸಿ, ಪುನಃ ಗುಲಾಮರಾಗದೇ, ಸ್ವಾತಂತ್ರ್ಯ ವೀರರಾಗಿ, ಧೀರರಾಗಿ, ಭಾರತಮಾತೆಯ ಸುಪುತ್ರರಾಗಿ ಬೆಳೆಯುವಂತೆ ಹುರಿದುಂಬಿಸಬೇಕು ಗುಲಾಮಗಿರಿಯ ಅನಿಷ್ಟಗಳನ್ನು ಗಂಭೀರವಾಗಿ ಪ್ರತಿ ಭಾರತೀಯ ಗಮನಿಸುವಂತೆ, ಮಾಡುವುದು, ಎಲ್ಲ ಬುದ್ಧಿ ಜೀವಿಗಳ ಜವಾಬ್ದಾರಿಯಾಗಿದೆ

ಅಂದು ಸಾಮಾನ್ಯ ವ್ಯಕ್ತಿಗೆ, ಗುಲಾಮಗಿರಿ, ಆಘಾತವೆನಿಸಿ, ವಿಶಪ್ರಾಯವಾಗಿರಲಿಲ್ಲ. ಕೇವಲ ಕೆಲವು ರಾಜಕೀಯ ಪ್ರಜ್ಞೆ ಸ್ವಾತಂತ್ರ್ಯ ಮತ್ತು ಆತ್ಮ ಗೌರವಗಳ ಮೌಲ್ಯ ಬಲ್ಲಂಥ ಮಹಾನುಭಾವರು ಕಾತುರತೆಯಿಂದ ರಾಷ್ಟ್ರದ ಭವಿಷ್ಯದ ಚಿಂತನೆಯಲ್ಲಿ ಮಗ್ನರಾದರು. ಬಹು ಜನದ, ಉತ್ಸಾಹಕ್ಕೆ ಮತ್ತು ಉಳಿವಿಗೆ, ಸ್ಥಿವಿತ ಚಿತ್ತರಾದ ಕೆಲವೇ ಕಾರಣ ಪುರುಷರ ಶ್ರದ್ಧೆಯೇ ಕಾರಣ. ರಾಷ್ಟ್ರ ಹತ್ತೊಂಬತ್ತನೆಯ ಶತಮಾನದ ಕೊನೆಗೆ ಎರಡು ಭೀಮ ವ್ಯಕ್ತಿಗಳನ್ನು ಕಂಡಿತು : ರಾಜಾರಾಮ್ ಮೋಹನ್ ರಾಯರು, ಸಹೋದರತ್ವ ಮಾನವ

ಸ್ವಾತಂತ್ರ್ಯ, ಮತ್ತು ಸಮಾನತೆಗಳ ಹಣತೆಯನ್ನು ಹೊತ್ತಿಸಿದರು. ಸ್ವಾಮಿ ವಿವೇಕಾನಂದರು ಅದನ್ನು ಪ್ರಜ್ವಲಿಸಿದರು. ಪ್ರತ್ಯೇಕಿತ ಮನೋಭಾವದ ಪ್ರತಿಕೂಲತೆಯನ್ನು, ಅಂತರ ರಾಷ್ಟ್ರೀಯ ಬಾಂಧವ್ಯದ ದಿವ್ಯತೆಯನ್ನು, ಮತ ಮೌಢ್ಯದ ಅನರ್ಥಗಳನ್ನು, ಜನ ಸಂಘಟನೆಯ ಅನಿವಾರ್ಯವನ್ನು ಒತ್ತಾಯಿಸಿದರು. ಸಾಮಾಜಿಕ ಶಕ್ತಿಯ ಮೇಲ್ಮೆ ಯನ್ನು, ಆರ್ಥಿಕ ಅಭಿವೃದ್ಧಿಯ ಅವಶ್ಯಕತೆಯನ್ನು, ಸ್ವಾತಂತ್ರ್ಯ, ಸಮಾನತೆ, ವ್ಯಕ್ತಿತ್ವದ ಮತ್ತು ಪ್ರಜಾಪ್ರಭುತ್ವದ ಪವಿತ್ರತೆಗಳನ್ನು, ರಾಷ್ಟ್ರ ಮತ್ತು ಪುರುಷ ನಿರ್ಮಾಣ ಮುಂತಾದ ಉಚ್ಚ ಆದರ್ಶಗಳನ್ನು ಆಸಕ್ತಿಯಿಂದ ಮನದಟ್ಟು ಮಾಡಿಸಿದರು. ರಾಷ್ಟ್ರದ ಚಿಂತನೆಯ ಬಗ್ಗೆ ಬಹುಜನ ಪಾಲ್ಗೊಳ್ಳುವಂತಾಯಿತು. 1885 ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸು ಉದ್ಭವಿಸಿತು. ಧರ್ಮ ಸ್ವರೂಪಿಗಳಾದ ಗೋಪಾಲಕೃಷ್ಣ ಗೋಖಲೆ, ಲೋಕಮಾನ್ಯತಿಲಕರುಗಳಿದ್ದವೆ, ಅಹಿಂಸಾ ಅವತಾರ ಯಾದ ಮಹಾತ್ಮಗಾಂಧಿಯವರ ನೇತೃತ್ವದಲ್ಲಿ, ಒಂದು ತೇಜೋ ರಾಶಿಯ, ಪ್ರತಿಭಾಶಾಲಿಗಳನ್ನು ಭಾರತ ಹೊರತಂದುದನ್ನು ನೋಡು ತ್ತೇವೆ. ಆ ಮಹಾಪುರುಷರೆಲ್ಲ, ಸೇವೆಯ, ತ್ಯಾಗದ ಮತ್ತು ಸತ್ಯದ ಪ್ರತೀಕರಾಗಿದ್ದರು

ಈ ಚಳುವಳಿಯ ನಾಯಕರ ಗಳು, ವಿಶ್ವವ್ಯಾಪ್ತಿಯ ಉದಾರ ದೃಷ್ಟಿಯ ವೇದಾಂತದ ಮತ್ತು ಪಾಶ್ಚಿಮಾತ್ಯರ ಆಧುನಿಕ ಜ್ಞಾನಗಳಿಂದ ಪ್ರೇರಿತ ರಾಗಿದ್ದ ಅತಿ ಶ್ರೇಷ್ಠ ಜ್ಞಾನಿಗಳು. ಧರ್ಮ ಆದರ್ಶವನ್ನು ಪುನರ್ ನಿರ್ಮಿಸಿ, ಸಾಮಾನ್ಯರಿಗೆ ಬೋಧಿಸಲು ಭಗವದ್ಗೀತೆಯ ಮರೆಹೋದರು. ಅನುಸರಿಸುವವರ ಸಂಖ್ಯೆ ಅತಿ ವಿರಳವಾದರೂ, ನೈತಿಕ ನಂಬಿಕೆ ಮತ್ತು ಸುಗುಣಗಳ ಮಹತ್ವ ವಿಶ್ವವ್ಯಾಪ್ತಿಯಾದವುಗಳು ಎಂಬುದನ್ನು ದೃಢ ಪಡಿಸಿಕೊಂಡಿದ್ದರು. ವೋಡಿದಂಥವಾದ ಗೀತೆಯಿಂದಲೇ ಪ್ರಾಣ ಪ್ರಾಯರಾದ ಸಾಮಾನ್ಯ ಜನರನ್ನು ಹುರುದುಂಬಿಸಲು ಸಾಧ್ಯವೆಂದು ಮನಗಂಡರು. ಬಲಿಷ್ಠ ಬ್ರಿಟಿಷ್ ಸಾಮ್ರಾಜ್ಯವನ್ನು ಪ್ರತಿಭಟಿಸಲು, ಬೇಕಾದ ಧರ್ಮದ ಆದರ್ಶಗಳು ಗೀತೆಯ ಗರ್ಭದಲ್ಲಿ ಹೇರಳವಾಗಿ

ಹುದಗಿರುವುದನ್ನು ಕಂಡುಕೊಂಡರು. ಸಾಹಿತ್ಯ ಕಿರೀಟಾಭರಣವಾದ ಗೀತೆ, ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸಮಾನತೆಯಾಯಿತು ಮೈತ್ರೀಭಾವ, ಅನ್ಯಮತ ಸಹಿಷ್ಣುತೆ, ಸ್ಥಿರಪ್ರಜ್ಞತ್ವ, ಮುಂತಾದ ಗೀತೆಯ ಭಾವೋದ್ರೇಕ ಸಂದೇಶಗಳು ಸ್ವಾತಂತ್ರ್ಯಸಮರದ ಕಾರ್ಯಸಾಧನೆಯಾಗಿ ಪರಿಣಮಿಸಿದವು

ಮಹಾತ್ಮ ಗಾಂಧಿಯವರು, ಅನೇಕ ಆಹುತಿಗಳನ್ನು ಅರ್ಪಿಸಿ, ನುರಿತ ರಾಜಕಾರಣಿಯಾಗಿ ಸ್ವಾತಂತ್ರ್ಯ ಸಮರದ ನಾಯಕತ್ವವನ್ನು ಕೈಗೊಂಡರು. ಸಾಮಾನ್ಯ ಜನರ ಶಕ್ತಿ, ಮತ್ತು ಸತ್ಯದ ಪ್ರಾಮುಖ್ಯತೆಯನ್ನು, ಪ್ರಯೋಗ ಮತ್ತು ಅನುಭವಗಳಿಂದ, ಕಂಡರು. ಜನರ ಅತಿ ನಿಕಟವಾದ, ನಿರಂತರದ ಸಂಬಂಧದಿಂದ ಅವರ ನಾಡಿಯ ಮಿಡಿತವನ್ನು ಅರಿತು ಉದ್ವೇಗಗಳಿಗೆ ಸ್ಪಂದಿಸುವ, ಆಶ್ಚರ್ಯಕರವಾದ ಶಕ್ತಿಯನ್ನು ಗಳಿಸಿದರು. ಬ್ರಿಟಿಷರು ತಮ್ಮ ಆಡಳಿತವನ್ನು ಮುಂದುವರಿಸುವುದಕ್ಕೋಸ್ಕರ, ನೆಟ್ಟು ಬೆಳಗಿಸಿದ್ದ, ಮತವೈರತ್ವವನ್ನು, ಕಿತ್ತು ಹಾಕಲು ಕೊನೆ ಉಸಿರಿರುವವರೆವಿಗೂ ಸರ್ವ ಪ್ರಯತ್ನಮಾಡಿದರು.

ಸುಮಾರು ಅರ್ಧ ಶತಮಾನಗಳಕಾಲ, ಭಾರತದ ವಿಮುಕ್ತಿಗಾಗಿ ಕೋಟಿ, ಕೋಟಿ ಜನ, ವಿವಿಧ ಬಗೆಯಲ್ಲಿ, ತಮ್ಮನ್ನೇ ತಾವು ಆಹುತಿ ಕೊಟ್ಟುಕೊಂಡು, ಮಾತೃಭೂಮಿಯ ಋಣ ತೀರಿಸಿದರು. ಗಡಿಪಾರು ಆದವರು ಅನೇಕ. ಗಲ್ಲಿಗೇರಿಸಲ್ಪಟ್ಟವರು ಸಾವಿರಾರು. ನಗು ಮುಖದಿಂದ ಗಂಭೀರದಿಂದ ಮತ್ತು ಪೌರುಷದಿಂದ ಫಾಸಿ ಶಿಕ್ಷೆಯನ್ನು ಸ್ವೀಕರಿಸಿದವರು ಬಹುಮಂದಿ. ಸಂವತ್ಸರಗಳಕಾಲ, ಮನೆ ಮಠ ತೊರೆದು, ಗುಪ್ತಾಚಾರರಾಗಿದ್ದರು. ಘನತೆಯಿಂದ ಅಹಿಂಸಾವ್ರತದಿಂದ, ಬ್ರಿಟಿಷರ ಗುಂಡಿನೇಟಿಗೆ, ಎದೆಯೊಡ್ಡಿ, ಬಿಸಿರಕ್ತವನ್ನು ಬೀದಿಗೆ ಚೆಲ್ಲಿದ, ವೀರ ನರನಾರಿಯರ ಸಂಖ್ಯೆ ಅಪಾರ. ಆಜ್ಞಾವರ್ತಿಗಳಾಗಿ ಪ್ರತಿಕಾರದಿಂದ ಸ್ವಜನ ಪೋಲೀಸರ ದೊಣ್ಣೆಗಳಿಂದ, ಎಲ್ಲಾ ಪಟ್ಟಣಗಳಲ್ಲೂ, ಪ್ರತಿದಿನ, ನೂರಾರು, ಸ್ತ್ರೀಪುರುಷರು, ಬಾಲಕ

ಬಾಲಕಿಯರು, ವೃದ್ಧರುಗಳು ಬರಡೆ ಬಕ್ಕರಿಮಾಡಿಸಿಕೊಂಡು ಕೈ ಕಾಲು, ನಡುಮುರಿಸಿಕೊಂಡು, ಅಂಗವಿಕಲರಾಗುತ್ತಿದ್ದವರ ಸಂಖ್ಯೆ ಲೆಕ್ಕವಿಲ್ಲ. ಶರಣಾಗದೆ ಶೌರ್ಯದಿಂದ 'ಜೈ ಭಾರತ್ ಮಾತ' ಎಂಬ ಜೈ ಘೋಷ ಮಾಡುತ್ತ ಸಂತೋಷದಿಂದ ದಸ್ತಗಿರಿ ಮಾಡಿಸಿಕೊಂಡವರ ಸಂಖ್ಯೆಯೂ ಅಪಾರ. ಕಾರಾಗೃಹಗಳನ್ನು ಭರ್ತಿಮಾಡಲು, ಇರುವೆಸಾಲಿನಂತೆ ಸಾಲುಕಟ್ಟಿದ್ದ ಜನ ಸಮೂಹ ಆಶ್ಚರ್ಯಕರವಾದುದು. ಮನೆಮಠ ಆಸ್ತಿಪಾಸ್ತಿಗಳನ್ನು ಹರಾಜು ಹಾಕಿಸಿಕೊಂಡವರು ಅನೇಕ. ಇಂಥ ಅದ್ಭುತ ಆಹುತಿ ಅರ್ಪಿಸಿದ, ದೇಶಭಕ್ತರ ತ್ಯಾಗದ ಋಣವನ್ನು ಅವರ ಪೀಳಿಗೆ ಶತಮಾನಗಳ ಕಾಲ ಹರಿಸಿದರೂ ಸಾಲದು ಇಂಥ ತ್ಯಾಗ ಪುರುಷರು ಈ ಭೂಮಿಯ ಮೇಲೆ ಬದುಕ್ಕಿದ್ದರೆ! ಎಂಬ ಅನುಮಾನ ಇಂದಿನವರಿಗೆ ಆದರೆ ಆಶ್ಚರ್ಯವೇನಿಲ್ಲ ಆ ಸಾತ್ವಿಕರ ಕನಸು ಬಹುಜನದ ಸುಖ, ರಾಮರಾಜ್ಯ - ಧರ್ಮಶೀಲತೆಯ ರಾಜ್ಯ.

ಬಹು ಜನರ ಬಲಿದಾನದಿಂದ 1947 ರಲ್ಲಿ ಭಾರತ ಸ್ವಾತಂತ್ರ್ಯವಾಯಿತು. ಕಟ್ಟಕಡೆಗೆ, ವಿಧಿ ಇಲ್ಲದೆ ಬ್ರಿಟಿಷರು ಜಾಗ ಬಿಟ್ಟರು. ಭಾರತ ಹೋಳುಮಾಡುವುದರಲ್ಲಿ ಯಶಸ್ವಿಯಾದರು. 556 ರಾಜರುಗಳು ಸ್ವಾತಂತ್ರರೆಂದು ಘೋಷಿಸಿದರು. ಯಾರು ಸುಖಶಾಂತಿಯಿಂದ ಇರದಂತೆ ಕುತಂತ್ರಗಳನ್ನು ಮಾಡಿದರು. ದ್ವೇಷದ ಕಿಡಿ ಮುಸೆಯಲು ಬೇಕಾದಷ್ಟು ಅವಕಾಶಗಳನ್ನು ಕಲ್ಪಿಸಿದರು. ಇಂಗ್ಲೇಂಡಿನ ಅಭ್ಯುದಯ ಅಪೇಕ್ಷಿಸದಿದ್ದರೆ ಭಾರತಕ್ಕೆ ಪ್ರಗತಿ ಇಲ್ಲ ಎಂಬ ಗಾಂಧೀಜಿ ಅವರ ಉಚ್ಚ ಆದರ್ಶಕ್ಕೆ, ಬದಲಾಗಿ, ಬ್ರಿಟಿಷರು ಜಿದ್ದಿನ ಉರಿಯನ್ನೇ ಕಾರಿದರು, ಸಂಪೂರ್ಣ ಮುಸ್ಲಿಂರ ರಾಜ್ಯವೆಂದು ಘೋಷಿಸಲ್ಪಟ್ಟ ಪಾಕಿಸ್ತಾನ, ಹಿಂದು, ಸಿಖ್ಖರನ್ನು ನಿರ್ದಾಕ್ಷಿಣ್ಯವಾಗಿ, ಸರಕಾರ ಬಲದಿಂದ ಹೊರ ತಳ್ಳಿದರು. ಇತಿಹಾಸದಲ್ಲಿ ಹಿಂದೆ ಎಂದೂ ಕೇಳರಿಯದ ಸಂಕಟ, ಹಿಂಸೆ, ಕ್ರೌರ್ಯ, ರಕ್ತಪಾತ, ಅಮಾನುಷ ಅವಮಾನ ನಡೆದು ಹತ್ತುಲಕ್ಷ ಜನ ಮಡಿದರು. ನಾನೂರುಸಾವಿರ ಹಿಂದು ಸಿಖ್ಖರು ಡೆಲ್ಲಿಗೆ ಸರ್ವಸ್ವಗಳನ್ನು ಕಳೆದುಕೊಂಡು ಕಣ್ಣೀರು ಸುರಿಸುತ್ತ ಬಂದರು. ಇದಕ್ಕೆ ಪ್ರತಿಕ್ರಿಯೆ

ಯಾಗಿ ಭಾರತದಲ್ಲೂ ಆದ ಮತೀಯ ಗಲಭೆಗಳು, ಮತ್ತು ನಿರಾಶ್ರಿತರ ಪುನರ್ವಸತಿ, ಹೊಸ ಸರ್ಕಾರವನ್ನು ಅಲ್ಲಾಡಿಸಿತು. ಪ್ರಥಮ ಪ್ರಧಾನಿ, ನೆಹರು, ಉಪಪ್ರಧಾನಿ, ಉಕ್ಕಿನ ವ್ಯಕ್ತಿ ಸರದಾರ್ ಪಟೇಲ್ ಮತ್ತು ಅವರ ಅನುಯಾಯಿಗಳು ತೋರಿದ ಆಡಳಿತ ದಕ್ಷತೆ, ನಿಷ್ಪಕ್ಷಪಾತ, ಕರುಣೆ, ಅಸದಳವಾದುದು. ಹಂಚಿ ಹರಿದಿದ್ದ ಭಾರತ ವನ್ನು ಒಂದುಗೂಡಿಸಿದ ಕೀರ್ತಿ ಸರದಾರರದು. ದೇವಮಾನವರೆನಿಸಿದ ಮಹಾತ್ಮಗಾಂಧಿ ನಿರಾಶ್ರಿತರ ಕಣ್ಣೀರೊರಸಿ, ಕೋಮು ದಳ್ಳುರಿಯನ್ನು ಹತ್ತಿಕ್ಕಿ, ಹಾಳುಬಿದ್ದ ಎಲ್ಲ ಮುಸ್ಲಿಂ ಸ್ಮಾರಕಗಳನ್ನು ಪುನರ್ನಿರ್ಮಾಣ ಬಯಸಿದರು. ಹಿರಿಯ ರಾಷ್ಟ್ರ ಭಾರತ, ಪಾಕಿಸ್ತಾನದ ಬಗ್ಗೆ ತಾಳ್ಮೆ, ಪ್ರೀತಿ, ಗೌರವ, ಬೆಳಸಿಕೊಂಡು, ಮುಸ್ಲಿಮರನ್ನು ಸೋದರರಂತೆ ಕಾಣಬೇಕೆಂದು, ಬಿಡದೆ ಬೋಧಿಸುತ್ತಿದ್ದರು. 30 - 1 - 1948 ನೆ ದಿನ ಗಾಂಧಿ ಗುಂಡಿನೇಟಿಗೆ ಬಲಿಯಾದರು. ಮುಸ್ಲಿಂರ ಪ್ರಬಲತೆಯ ಜಮ್ಮು ಕಾಶ್ಮೀರಕ್ಕೆ ಹಿಂದು ರಾಜ ಹರಿಸಿಂಗರು ಭಾರತಕ್ಕೆ ಸೇರುವ ಇಚ್ಛೆ ತೋರುವುದರೊಳಗಾಗಿ, ಪಾಕಿಸ್ತಾನ ಒಂದು ಭಾಗವನ್ನು ಆಕ್ರಮಿಸಿತು. ಅಘೋಷಿತ ಸಮರ ನಡೆಯಿತು. 1948 ರ ಕೊನೆಗೆ ಮಿಲಿಟರಿ ಸಲಹೆಗೆ ವಿರುದ್ಧವಾಗಿ ನೆಹರು. ಸಂಯುಕ್ತ ರಾಷ್ಟ್ರಸಭೆಗೆ, ಒಪ್ಪಿಸಿ ಕದನ ವಿರಾಮ ಘೋಷಿಸಿದರು. ಇಂದಿಗೂ ಈ ಸಮಸ್ಯೆ ಪರಿಹಾರವಿಲ್ಲದೆ ಧಗಧಗಿಸುತ್ತಿದೆ. ಇಡೀ ರಾಷ್ಟ್ರವನ್ನೇ ಅಶಾಂತಿ ಸಾಗರಕ್ಕೆ ತಳ್ಳಿದೆ ವೈಮನಸ್ಸು, ಅಪನಂಬಿಕೆ, ಪೃಥಕ್ಕರಣ, ಕೊಲೆ, ಅಕ್ರಮಣ ಅರಾಜಕತೆಗಳಿಗೆ ಬ್ರಿಟಿಷರು ಬಿತ್ತಿದ ಬೀಜ, ಭಾರತ ಪಾಕಿಸ್ಥಾನಗಳ ಫಲವತ್ತಾದ ಭೂಮಿಯ ಮೇಲೆ ಹೆಮ್ಮರವಾಗಿ ಬೆಳೆದು, ಬೇರು ಭದ್ರವಾಗಿದೆ.

ಸಾರ್ವಭೌಮವಾದಿಗಳು, ಸೀಮೆಗೊಬ್ಬರ ಹಾಕಿ, ಕಟ್ಟೆ ಕಟ್ಟಿ ನೀರೆರೆದು, ಸೊಂಪಾಗಿ ಬೆಳಸುತ್ತಿದ್ದಾರೆ. ಈ ವಿಷ ಬೀಜ, ಶ್ರೀಲಂಕಾ, ನೇಪಾಳ, ಟಿಬೆಟ್, ಬರ್ಮಾ, ಥೈಲ್ಯಾಂಡ್, ಇಂಡೋನೇಷಿಯ, ಅಫಘಾನಿ ಸ್ಥಾನ, ಮತ್ತು ಇತರ ಏಷ್ಯಾ ಮತ್ತು ಮುಸ್ಲಿಂ ರಾಜ್ಯಗಳಲ್ಲೂ

ಹರಡುತ್ತಾ ಇದೆ. 1954 ರ ಸೀಟೋ ನ್ಯಾಟೋ ಒಪ್ಪಂದದ ಪ್ರಕಾರ ಏಷ್ಯನರನ್ನು ತಮ್ಮ ಸಹೋದರರ ಮೇಲೆ ಎತ್ತಿಕಟ್ಟುವ ಕುತಂತ್ರ ನಡಿಸಿದರು. ಇದನ್ನು ಮಾರ್ತಡಿಯಲು, ಪ್ರತಿಕರಿಸಲು, ಸಮೀಕರಿಸಲು, ನೆಹರು ಅವರು ಈಜಿಪ್ಟ್‌ನ ಅಧ್ಯಕ್ಷ ನಾಸರ್ ಮತ್ತು ರಷ್ಯಾ ಬೆಂಬಲದಿಂದ, ಬರ್ಮಾ, ಸಿಲೋನ್, ಇಂಡೋನೇಷಿಯ, ಪಾಕಿಸ್ತಾನಗಳ ಮುಖ್ಯಸ್ಥರನ್ನು ಕೂಡಿಸಿಕೊಂಡು 1955 ಬಾಂಡುಂಗ್ ಒಪ್ಪಂದ ಮಾಡಿಕೊಂಡರು. 1954 ರಲ್ಲಿ ಚೀನದೊಡನೆ ಮಾಡಿಕೊಂಡ 25 ವರ್ಷಗಳ ಪಂಚಶೀಲ ಶಾಂತಿ ಒಪ್ಪಂದ, ಎಂಟು ವರ್ಷಕ್ಕೆ ಮುರಿದು ಬಿದ್ದು ಯುದ್ಧ ನಡೆಯಿತು, ನೆಹರು ರೋಗಗ್ರಸ್ತರಾದರು. ಹಿಂದಿ ಚೀನಿ ಬಾಯ್ ಅವರ ಪತನಕ್ಕೆ ಕಾರಣವಾಯಿತು. ಕಾಶ್ಮೀರ ಸಮಸ್ಯೆ ಬೆನ್ನುಪಣೆಯಾಗಿ ಮುಂದುವರಿಯುತ್ತಿದೆ. ಆಲಿಪ್ತತೆ, ಪಂಚಶೀಲ, ಇಂಥ ಆದರ್ಶ ಮತ್ತು ಭಾವನ ನಿರೂಪಣೆಗಳು ಅಭಿನಂದಾರ್ಹವಾದುವು. ನಮ್ಮ ನೀತಿ ನಿಷ್ಠೆಗಳು ಏನಿದ್ದರೂ, ರಾಷ್ಟ್ರದ ಆಕಾರಕ್ಕೆ ಹೊಂದುವ ರಕ್ಷಣಾಪಡೆ ಅನಿವಾರ್ಯ. ಅಲ್ಲದೆ ರಕ್ಷಣೆಯು ಪ್ರವೀಣರಿಗೆ ಪ್ರಾಮುಖ್ಯತೆ ಇರಬೇಕು.

ಅತ್ಯುಚ್ಛ ವ್ಯಕ್ತಿತ್ವದ ಮತ್ತು ಚುರುಕು ಬುದ್ಧಿಯ ನೆಹರುರವರಿಗೆ ಭಾರತದ ಆರ ಹೊಟ್ಟೆಯ ಜನಸ್ತೋಮದ ಬಗ್ಗೆ ಗಾಢ ಅನುಕಂಪ ಮತ್ತು ಸಹಾನುಭೂತಿ ತುಂಬಿತ್ತು. ನೆಹರು ಅವರ ಸ್ವಾತಂತ್ರ ಸಮರಕ್ಕೆ ತ್ಯಾಗ ದುಡಿಮೆ, ಸಮರ್ಪಣ ಮನೋಭಾವ, ಕಠಿಣವಾದ ಸ್ವಯಂ ಶಿಸ್ತು ಮತ್ತು ಉನ್ನತವಾದ ವೇದಾಂತ ಪರಂಪರೆಗಳು ಸಾಮಾನ್ಯ ಜನರ ಮುದ್ದು ವ್ಯಕ್ತಿಯನ್ನಾಗಿಸಿತ್ತು.

ಭಾರತದ ಸೆಕ್ಯುಲರ್ ಅಥವಾ ಲೌಕೀಕ ರಾಷ್ಟ್ರ ಎಂಬ ಸಂವಿದಾನ ಘೋಷಣೆಗೂ ಮತ್ತು ಅದರ ಅನುಸರಣೆಗೂ ನೆಹರು ಅವರ ಪಾತ್ರ ಅಪಾರ. ನೆಹರು ಅಂಥ ಶ್ರೇಷ್ಠ ಪ್ರಜಾಪ್ರಭುತ್ವವಾದಿಗಳು ಬಹು ವಿರಳ. ಅವರ ವಿಶ್ವ ಆಲೋಚನೆಗಳು ಅವರ ಪ್ರಬುದ್ಧ ಪ್ರಜ್ಞೆಯನ್ನು ಮತ್ತು

ಹಿಮಾಲಯದಷ್ಟು ಎತ್ತರದ ಉದಾತ್ತ ಬುದ್ಧಿಯನ್ನು ಪ್ರದರ್ಶಿಸುತ್ತವೆ, ಆದರೆ ಭಾರತದ ಈ ಸುಪುತ್ರ ತನ್ನ ದೇಶದ ಆರ್ಥಿಕ ಅಭಿವೃದ್ಧಿಯ ಬಗ್ಗೆ ಬಹು ಆತುರರಾಗಿದ್ದರು. ಪಾಶ್ಚಿಮಾತ್ಯ ಮಾದರಿಯ ಕೈಗಾರಿಕಾಕರಣ ಮತ್ತು ರಷ್ಯಾದ ಸಮಾಜಸ್ವಾಮಿತ್ವಗಳನ್ನು, ಭಾರತದ ಆಧುನೀಕರಣಕ್ಕೆ ಅತ್ಯುತ್ತಮ ಸಾಧನೆಗಳೆಂಬ ಭ್ರಾಂತಿಯಿಂದ ಸಮಾಜಶಾಸ್ತ್ರದ ಘನ ಪಂಡಿತರಾದ, ಸಂತ ಗಾಂಧೀಯವರ ಮಾರ್ಗದರ್ಶನವನ್ನು ಬುದ್ಧಿವಂತಿಕೆಯಿಂದ ಬದಿಗೊತ್ತಿದರು, ಇದರ ಫಲಿತಾಂಶ ಅರ್ಧಶತಮಾನಗಳ ಮೇಲೂ, ಭಾರತ ಬಡತನ ಗೆಲ್ಲಲು ಅಸಾಧ್ಯವಾಗದೆ, ಪ್ರಪಂಚದ ಪ್ರತಿಯೊಂದು ದೇಶಕ್ಕೂ ಸಾಲಗಾರನಾಗಿದೆ. ಹೊಸ ಸಾಲತೆಗೆದು, ಹಳೆಯ ಬಡ್ಡಿ ತೀರಿಸಬೇಕಾಗಿದೆ. ರಾಷ್ಟ್ರವನ್ನು ಮಾರಾಟ ಮಾಡಬೇಕೋ ಏನೋ ಎಂಬ ಭೀತಿ ಕಾಡುತ್ತಿದೆ. ಆರ್ಥಿಕ ಅಭಿವೃದ್ಧಿಗೆ ಕೈಗಾರಿಕೆಯ ಅನಿವಾರ್ಯತೆಯನ್ನು ಯಾರು ನಿರಾಕರಿಸುವಂತಿಲ್ಲ ಒಬ್ಬ ವ್ಯಕ್ತಿ ರಾಶಿವಸ್ತುಗಳನ್ನು ಹೊರತರುವುದರ ಬದಲು ಗುಂಪು ಗುಂಪು ಜನ ಸ್ವತಃ ದುಡಿದು ರಾಶಿ ಸಾಮಾನುಗಳನ್ನು ಮಾರುಕಟ್ಟೆಗೆ ಬಿಡುವ ವ್ಯವಸ್ಥೆಯೇ ಗಾಂಧೀಜೀಯವರ ಹಿತಭೋದೆ. ಇದಕ್ಕೆ ಏಕಸಾಮ್ಯವಾದಿಗಳ, ಪಟ್ಟಭದ್ರಹಿತಾಸಕ್ತಿಗಳ, ಸಂಪ್ರದಾಯವಾದಿಗಳ ಅಡ್ಡಿ ಆತಂಕ ಅಪಾರವಾಯ್ತು. ಸಿರಿವಂತರು. ಬದಲಾವಣೆಗಳಿಗೆ ಸಮ್ಮತಿಸುವುದು ಅಸಾಧ್ಯ.

ನೆಹರು ಅವರು ಬಹು ಉತ್ಸಾಹದಿಂದ ಅನುಸರಿಸಿದ ರಷ್ಯನ್ ಮಾದರಿಯ ರಾಷ್ಟ್ರೀಕರಣ ದೇಶವನ್ನು ದಿವಾಳಿ ಎಬ್ಬಿಸಿದೆ. ಕೈಗಾರೀಕರಣ ಬೇಕು. ಅದು ಪ್ರತಿ ಸಂಸಾರದ ಒಂದು ಕೈಗಾರಿಕ ಘಟಕವಾಗಬೇಕು. ಯಂತ್ರಗಳ ಆಮದಿಗಾಗಿ ನಾವು ವಿದೇಶಕ್ಕೆ ಸಾಲಗಾರರಾಗಿದ್ದೇವೆ. ಕಮ್ಮಾರನ ಕುಲುಮೆ ಚೀನಾದ ಕೈಗಾರಿಕಾ ಆದರ್ಶ. "ದೊಡ್ಡ ಕೈಗಾರಿಕಾ ಸಂಕೀರ್ಣಗಳಿಗೆ ಕಾಯಬೇಡ". ಇದು ಕಮ್ಯುನಿಷ್ಟ್ ಚೀನಾದ ಸಿದ್ಧಾಂತ. ಇಂದು ಗ್ರಾಮಗಳ ಕಮ್ಮಾರನ ಕುಲುಮೆಗಳು ಕಣ್ಮರೆ

ಯಾಗಿವೆ. ಹೊಲ ಉಳುವವನು, ಗುಳ ಗುದ್ದಲಿ ಕಟ್ಟಿಸಲು, ಕಿರುಕುಳದ ಬಸ್ಸಿನ ಚಾವಣಿ ಹತ್ತಿ ಪೇಟೆಗೆ ಪ್ರಯಾಣ ಮಾಡಬೇಕಾಗಿದೆ.

ರಾಷ್ಟ್ರೀಕರಣ, ಕೇಂದ್ರೀಕರಣ ಒಂದು ಶಾಪವಾಗಿ ಪರಿಣಮಿಸಿದೆ. ಸಾಮಾನ್ಯನ ಉನ್ನತಿಗೆ ಬದಲಾಗಿ ಅವನ ಅಧೋಗತಿಯಾಗುತ್ತಿದೆ. ಕೇಂದ್ರೀಕರಣವೆಂದರೆ ಕಾನೂನು, ಕಟ್ಟಳೆಗಳ ಕಟ್ಟು ಬಲುಮೆ. ಅಪ್ಪಣೆ ಚೀಟಿ, ಸನ್ನದ್ದುಗಳ ಶಾಸನಗಳಿಂದ ಸರ್ಕಾರಿ ಸೇವಕರ ಸಾರ್ವಭೌಮತ್ವಕ್ಕೆ ಎಲ್ಲೆ ಇಲ್ಲವಾಗಿದೆ ಬಂಡವಾಳ ಮತ್ತು ಉದ್ಯಮಗಳು ಆರಿಸಿದ ಕೆಲವೇ ವ್ಯಕ್ತಿಗಳ ಸ್ವತ್ತಾಗಿದೆ. ಇದರಿಂದ ಉತ್ಪಾದನೆ ಇಳಿದಿದೆ. ಭ್ರಷ್ಟಾಚಾರ ವ್ಯಾಪಕವಾಗಿದೆ ವ್ಯಕ್ತಿಯ ಸ್ವಾತಂತ್ರ್ಯ ಹರಣವಾಗಿದೆ. ಸ್ವಾತಂತ್ರ್ಯ ರಾಜ್ಯದಲ್ಲಿ ಸಾಮಾನ್ಯ ಸೇವಕನಾಗಿದ್ದಾನೆ. ರಾಷ್ಟ್ರೀಕರಣವಾಗಿರುವ ಸಾರಿಗೆ ವ್ಯವಸ್ಥೆ, ಒಂದು ಶ್ರೇಷ್ಠ ಕಣ್ಣು ತೆರೆಸುವ ನಿದರ್ಶನ. ಸಾರ್ವಜನಿಕ ಬಂಧನದ, ಹಂಗಿನ ಅಸುಖ ಪ್ರಯಾಣದ ಜೊತೆಗೆ ಅವರ ಜೆವರಿನ ಹಣ ಅನೇಕ ನೌಕರರನ್ನು ಲಕ್ಷಾಧೀಶರನ್ನಾಗಿ ಮಾಡಿದೆ.

ಕೈಗಾರಿಕಾ ಕೇಂದ್ರೀಕರಣದ ಅನಾಹುತಗಳಿಗೆ ಕೊನೆಯಿಲ್ಲ. ಹಳ್ಳಿಗಳ ವಲಸೆಯಿಂದ ಸ್ವತಂತ್ರ ವ್ಯವಸಾಯ ಉದ್ಯಮಕ್ಕೆ ಶಕ್ತರಾದ ಜನರಿಲ್ಲವಾಗಿದೆ. ಪಟ್ಟಣಗಳೆಲ್ಲ ಕೊಳಕು ಕೇರಿಗಳಾಗಿ ಪರಿಣಮಿಸಿ, ಅನೈತಿಕ ಆಗರಗಳಾಗಿವೆ. ಸಂಸಾರದ ಘಟಕವಾದಾಗ ನೀತಿ, ನಿಯಮ, ವ್ಯಕ್ತಿ ಸ್ವಾತಂತ್ರ್ಯ, ಆಲೋಚನೆ, ಉತ್ಸಾಹ, ಒಟ್ಟಾರೆ ಶ್ರಮ, ಒಂದು ಉದ್ಯೋಗವನ್ನು ಅಭಿವೃದ್ಧಿಗೊಳಿಸುತ್ತದೆ. ರೇಷ್ಮೆ ಬೆಳೆ ಕೈಗಾರಿಕೆಯನ್ನು ಉದಾಹರಣೆಯಾಗಿ ಪರೀಕ್ಷಿಸಿ. ಕೆ.ಜಿ. ಗೂಡಿಗೆ ನೂರು ರೂಪಾಯಿ ಏರಿದ್ದರಿಂದ ಜೀತಕ್ಕೆ ಇದ್ದ ಆಳುಗಳೆಲ್ಲ ಸ್ವತಂತ್ರವಾಗಿ ತಿಂಗಳಿಗೆ ಸಾವಿರಾರು ರೂಪಾಯಿ ಸಂಪಾದಿಸುತ್ತಿದ್ದಾರೆ. ಆಡಳಿತ, ಗೂಡಿನ ಬೆಲೆ ಇಳಿಸಿ, ಈ ಆನಂದಕ್ಕೆ, ಸುಯೋಗಕ್ಕೆ, ಯಾವ ಘಳಿಗೆಯಲ್ಲಿ ಭಗ್ನ ತರುತ್ತಾರೊ ಗೊತ್ತಿಲ್ಲ ? ಇಂದು ದೊಡ್ಡ ಪಟ್ಟಣಗಳಿಗೆ ಸಮಸ್ಯೆ

ಯಾಗಿರುವ, ದೊಡ್ಡ ಕೈಗಾರಿಕೆಗಳನ್ನು, ದೂರದ ಹಳ್ಳಿಗಳಿಗೆ ಹಂಚಿದರೆ ಬಡತನವನ್ನು ಕಮ್ಮಿ ಮಾಡುವುದಲ್ಲದೆ, ಪಟ್ಟಣದ ಸ್ಥಿತಿಯನ್ನು ಸುಧಾರಿಸಬಹುದು. ಹಾಳೂರಾಗುವುದನ್ನು ತಪ್ಪಿಸಿ ಬಹು ಬೆಂಗಳೂರನ್ನು ನಿರ್ಮಿಸಬಹುದು. ಸಾವಿರಾರು ಅನುಪಯುಕ್ತ ಸಾಮಗ್ರಿಗಳ ಉತ್ಪಾದನೆ ತಕ್ಷಣ ನಿಲ್ಲಬೇಕಾಗಿದೆ. ಜೀವಾಧಾರ ವಸ್ತುಗಳ ಉತ್ಪಾದನೆಗೆ ಪ್ರೋತ್ಸಾಹ ದೊರೆಯಬೇಕಾಗಿದೆ.

ನೆಹರು ಅವರು ನಿಶ್ಚಯವಾಗಿಯೂ ನಿರ್ಮಲ ಹಸ್ತರು. ಆದರೆ ಭ್ರಷ್ಟಾಚಾರಿಗಳನ್ನು ಹತೋಟಿಗೆ ತರಲು ನಿಸ್ಸಾಹಯರಾದರು. ಕಾಂಗ್ರೆಸ್ ಪಕ್ಷದ ಐಕ್ಯತೆ ಮತ್ತು ತಮ್ಮ ಮುಂದಾಳತ್ವ ಉಳಿಸಿಕೊಂಡು ಹೋಗುವ ಆಸೆಯಿಂದ, ಸಹೋದ್ಯೋಗಿಗಳ ಲಂಚಕೋರತ್ವವನ್ನು ಖಂಡಿಸುವುದು ಕಷ್ಟವಾಗಿತ್ತು - ಅಧಿಕಾರದ ಆಸೆ, ಗೌರವದ ಹಂಬಲ ಅತಿಯಾದಾಗ ನೈತಿಕ ಮೌಲ್ಯಗಳನ್ನು ಹಿಡಿಯುವುದು ಅಸಾಧ್ಯ. ತನ್ನ ರಾಜಕೀಯ ಗುರುಗಳಂತೆ ಅಧಿಕಾರ ಅನಾಸಕ್ತಿ - ಆಚರಣೆ ಅಸಾಧ್ಯವಾಯ್ತು.

ಸ್ವತಃ ಇತಿಹಾಸಕರ್ತರಾದ ನೆಹರು, ತಾವು ಶಕ್ತರಾಗಿದ್ದಾಗಲೇ ಉತ್ತರಾಧಿಕಾರಿಯನ್ನು ನೇಮಿಸಿ,ರಾಷ್ಟ್ರದ ಭವಿಷ್ಯವನ್ನು ರೂಪಿಸಬೇಕಾಗಿತ್ತು. ಅಧಿಕಾರಕ್ಕೆ ಅಂಟಿಕೊಳ್ಳುವ ಅಪವಾದ, ನಮ್ಮ ಪ್ರಥಮ ಪ್ರಧಾನಿಯಿಂದಲೇ ಪ್ರಾರಂಭವಾಗಿ ರಾಷ್ಟ್ರ ಅನೇಕ ಪೀಡೆಗಳಿಗೆ ಗುರಿಯಾಗಿದೆ. "ನಿಮ್ಮಲ್ಲೊಬ್ಬರು .ಮುಂದಿನ ಪ್ರಧಾನಿ" ಎಂದು ನೆಹರು, ಭಾರಿ ಬಹಿರಂಗ ಸಭೆಗಳಲ್ಲಿ ಯುವಕರನ್ನುದ್ದೇಶಿಸಿ ಹೇಳುತ್ತಿದ್ದರು. ಅಪ್ಪನ ಅಭೀಷ್ಟತೆಯನ್ನು ಮಕ್ಕಳು ಅನುಸರಿಸುವುದು ಅಪರೂಪ.

ನೆಹರು ಅವರಿಗೆ ಅನೇಕಸಾರಿ, ಸಂಸತ್ತಿನಲ್ಲಿ ಅಪಾರ ಬಹುಮತವಿತ್ತು. ಭಾಷೆ ನಾಗರೀಕ ನೀತಿ, ಮೀಸಲಾತಿ, ಸಮಾನ ಸಿವಿಲ್‌ಕೋಡು, ಶಿಕ್ಷಣ, ಕೃಷಿ, ಕುಟುಂಬ ಯೋಜನೆ ಮುಂತಾದ ಕಿರುಕುಳದ ಸಮಸ್ಯೆಗಳನ್ನುವೊಳಕೆಯಲ್ಲೇ ಸಂಪಡಿಸುವ,ಸದವಕಾಶವನ್ನು ಕಳೆದುಕೊಂಡರು ಆದರೂ ನೆಹರು ಅಂಥ ಶ್ರೇಷ್ಠ ರಾಜಕಾರಣಿ, ಪ್ರಧಾನಿ, ರಾಷ್ಟ್ರಕ್ಕೆ [illegible] ನಿಜ ವಿಭೂಷಣರು.

ಲಾಲ್ ಬಹದ್ದೂರ್ ಶಾಸ್ತ್ರಿಯವರು :  ಸರಳತನ, ಅಪ್ಪಟ ಗಾಂಧೀ
ವಾದಿ. ಹದಿನೆಂಟು ತಿಂಗಳು ರಾಷ್ಟ್ರದ ಎರಡನೇ ಪ್ರಧಾನಿಯಾಗಿ,
ರಾಷ್ಟ್ರದ ಶ್ಲಾಘನೆ ಮತ್ತು ಕೃತಜ್ಞತೆಯನ್ನ ಸಂಪಾದಿಸಿದರು. ಶ್ರೇಷ್ಠ
ರಾಜಧರ್ಮ ಅನುಸರಿಸಿದ ಅಪರೂಪದ ರಾಜಕಾರಣಿ. ದಕ್ಷ ಮತ್ತು
ಚೊಕ್ಕ ಆಡಳಿತ ನಡೆಸಿದ ನಿಗರ್ವಿ. ವಿಚಾರಶೀಲತೆ ಮತ್ತು ಪರಿಶೀಲತೆ
ಯಿಂದ ನಿರ್ಧಾರ ಕೈಗೊಂಡು ದಿಟ್ಟತನದಿಂದ ಪೂರೈಸುತ್ತಿದ್ದರು. ಕಾಲು
ಕೆರೆದು ಭಾರತದ ಮೇಲೆ ಧಾಳಿ ಮಾಡಿದ ಪಾಕಿಸ್ತಾನಕ್ಕೆ ಸೊಕ್ಕು
ಮುರಿದ ವೀರ. ತಾಸ್ಕೆಂಟಿಗೆ ಒಪ್ಪಂದಕ್ಕೆ ಹೋದ, ಸಾತ್ವಿಕ ಆದರೆ
ಕೆಚ್ಚೆದೆಯ ಪ್ರಾಮಾಣಿಕ ಪ್ರಧಾನಿ, ಸಾವನ್ನಪ್ಪಿದರು. ಬಹದ್ದೂರರು
ಬದುಕಿದ್ದರೆ, ರಾಷ್ಟ್ರಕ್ಕೆ ಸ್ಥಿರತೆ ಸಿಕ್ಕಿ ಸಮಸ್ಯೆಗಳ ಪರಿಹಾರ ಆಗುತ್ತಿ-
ತ್ತೆಂಬ ಅನಿಸಿಕೆ ಆವರಿಸಿದೆ. ಶಾಸ್ತ್ರಿಯವರು ಇಂದಿರಾಗಾಂಧಿಯವರನ್ನೂ
ತಮ್ಮ ಸಂಪುಟಕ್ಕೆ ಸೇರಿಸಿಕೊಂಡಿದ್ದರು. ತಂದೆ ಸತ್ತ ಮೇಲೆ ತಾನು
ಪ್ರಧಾನಿಯಾಗಲಿಲ್ಲ ಎಂಬ ಕೊರಗಿನಿಂದ ಶಾಸ್ತ್ರಿಯವರ ಆಡಳಿತವನ್ನು
ಟೀಕಿಸುತ್ತಲೇ ಇದ್ದರು. ಅವರನ್ನು ಸ್ಥಾನಪಲ್ಲಟ ಮಾಡುವ ಯೋಚನೆ
ಮಾಡುತ್ತಲೇ ಇದ್ದರು. ಗಾಂಧೀಜಿಯಂತೆ ಈ ಶ್ರೇಷ್ಠ ಸಂತ, ತನ್ನ
ಸಂತತಿಗೆ ಸಂಪತ್ತಿನ ಸಂತುಷ್ಟಿಯನ್ನಾಗಲೀ, ಅಧಿಕಾರದ ಆಸರೆಯನ್ನಾ
ಗಲೀ ಕಲ್ಪಿಸಿಹೋಗಲಿಲ್ಲ

ಇಂದಿರಾಗಾಂಧಿಯವರು : ಅಪೂರ್ಣ ಮಠ ವಿದ್ಯೆ, ದ್ವಿಪುತ್ರವತಿ
ದಾಂಪತ್ಯ ಭಂಗ, ಪ್ರಧಾನಿ ವಿಧುರ ಅಪ್ಪನ ಅತೀ ಅಕ್ಕರೆಯ ಏಕಮಾತ್ರ
ಮಗು, ಹೊಗಳು ಭಟ್ಟರಿಂದ ಸುತ್ತುವರಿದು, ಇಚ್ಛೆಗೆ ಇದುರಿಲ್ಲದೆ, ಹಠ
ಮಾರಿತನಕ್ಕೆ ಅಂಕೆ ಇಲ್ಲದ, ರಾಜಶಾಸ್ತ್ರದ ಶಿಷ್ಟಾಚಾರದ ಶಿಸ್ತು ಅಭ್ಯಸಿ
ಸುವ ಅವಕಾಶವಿಲ್ಲದೆ, ಭಾರತ ರಾಜಕುಮಾರಿಯಂತೆ ಬೆಳೆದ, ಯುವತಿ
ಶ್ರೀಮತಿ ಇಂದಿರಾಗಾಂಧಿಯವರು ರಾಷ್ಟ್ರದ ಮೂರನೇ ಪ್ರಧಾನಿ.
ಸ್ವಾತಂತ್ರ್ಯ ಸಮರದ ಯಾತನೆಗಳ ಕಹಿ ಕಾಣದೆ, ಪ್ರಧಾನಿ ಆದವರಲ್ಲಿ
ಪ್ರಥಮರು. ಸಂಸಾರದಲ್ಲಿ ಸಂಧಿಸದ ಮನಶಾಂತಿಯನ್ನು ಅರಸುತನ
ದಲ್ಲಿ ಅರಸಿದರು.

**ಲೋಪದೋಷಗಳಿಗೆ ಉದಾಸೀನತೆಯೇ ಕಾರಣ**



**ಅನರ್ಥಕ್ಕೆ ಅಲಕ್ಷ್ಯತೆ – ಮೂಲ**
**ಪ್ರವೀಣತೆಗೆ ಚಿತ್ತೈಕಾಗ್ರತೆ ಬೇಕು**
**ಸಾಧನೆಗೆ ಸಂಭ್ರಮ ಅವಶ್ಯಕ**

ಸದ್ಭಾವನೆಯ ಕಾಂಗ್ರೆಸ್ ಹಿರಿಯ ನಾಯಕರು ತಬ್ಬಲಿಯೆಂಬ ಮೋಹ ದೂರಾಲೋಚನೆ ರಹಿತರಾಗಿ, ರಾಷ್ಟ್ರಹಿತ ಪಣವಿಟ್ಟು. ಪ್ರಜಾತಂತ್ರದ ನಿಯಮಗಳನ್ನು ಗಾಳಿಗೆ ತೂರಿ, ಇಂದಿರಾಜಿಯವರನ್ನು ಪಟ್ಟಕ್ಕೇರಿಸಿದರು ಒಬ್ಬ ಮಹಿಳೆ, ಮಹಾ ಪುರುಷನ ಪುತ್ರಿ, ರಾಷ್ಟ್ರದ ಸೂತ್ರಧಾರಿಯಾದುದು ಅಂದು ಎಲ್ಲರಿಗೂ ಆನಂದ ತಂದಿತು ತಮ್ಮ ಅಧಿಕಾರಾವಧಿಯಲ್ಲಿ, ಎಷ್ಟು ಒಳ್ಳೆ ಕೆಲಸ ಮಾಡಿದ್ದರೂ, ಅದು ಗಣನೆಗೆ ಬರಲಿಲ್ಲ ಕಾರಣ, ತಮ್ಮ ಹಕ್ಕು ಸ್ಥಿರಪಡಿಸಿಕೊಳ್ಳುವ ಕಾತುರದಲ್ಲಿ ಸರಕಾರ ಮತ್ತು ಪಕ್ಷದ ತಾತ್ಕಾಲಿಕ ಮೌಲ್ಯಗಳನ್ನು ಗಾಳಿಗೆ ತೂರಿದರು ಪ್ರಜಾಪ್ರಭುತ್ವಕ್ಕೆ ಪರ್ಯಾಯ ಅರ್ಥವನ್ನು ಕಲ್ಪಿಸಿದರು ಅವರು ಅಧಿಕಾರಶಾಹಿ, ಗಟ್ಟಿಗರು ಸ್ವಾರ್ಥ ಸಾಧನೆಗಾಗಿ ಹಠವಾದಿ ಮತ್ತು ನಿಷ್ಠುರವಾದಿ. ಪಕ್ಷದಲ್ಲಿ ಇನ್ನಾರು ನಾಯಕತ್ವಕ್ಕೆ ಪ್ರಯತ್ನ ಪಡದಂತಹ ಅಡಚಣೆಗಳನ್ನು ತಂದೊಡ್ಡಿದರು ತಮ್ಮ ಆಜ್ಞಾವರ್ತಿಗಳಿಗೆ ಅನುವರ್ತಿಗಳಿಗೆ, ಹೊಗಳು ಭಟ್ಟರಿಗೆ ಮಾತ್ರ ಅನುಕೂಲ, ಅಧಿಕಾರ, ಅನುರುಕ್ತಿ ಅನುವಾಯಿತು.

ಅಕ್ಷಮ್ಯವಾದ, ಅವರ ಅನುವಂಶಿಕ ಇಚ್ಛೆ ಬಿಗಿಯಾದ ಉರುಳಾಯಿತು. ವಿದ್ಯಾಭ್ಯಾಸದಲ್ಲಿ ಹಿಂದುಳಿದಿದ್ದ ಕಾಂಗ್ರೆಸ್ ಸಂಸ್ಕೃತಿಯಲ್ಲಿ ಭರವಸೆ ಇಲ್ಲದ ಅಪಕ್ವ, ಕಿರಿಯ ಕುಮಾರ ಸಂಜಯರನ್ನು ಪಟ್ಟಕ್ಕೇರಿಸುವ ಪಟ್ಟಾಟ ಹಿಡಿದರು. ಸಂಜಯರು ಕಾರ್ಯತಹ ಪ್ರಧಾನಿ ಆದರು. ಪ್ರಧಾನಿಯ ಮೋಹರನ್ನು ಇಂದಿರಾರವರು, ಮಗನಿಗೆ ಧಾರೆ ಎರೆದಿದ್ದರು. ಹಾಲುಗೆನ್ನೆಯ ಕಿರಿಯ ಪುತ್ರನಿಗೆ, ದೇಶದಾದ್ಯಂತ ನೆಹರುರವರಿಗೆ ಸಲ್ಲುತ್ತಿದ್ದ ಮಿಗಿಲಾದ ಮರ್ಯಾದೆಗೆ ಏರ್ಪಡಿಸಿ, ಇಂದಿರಾರವರು ಹಿಗ್ಗುತ್ತಿ

ದ್ದರು. ಅಧಿಕಾರಕ್ಕಾಗಿ ಬಾಯಿ ಬಿಡುತ್ತಿದ್ದ ಆತ್ಮಗೌರವರಹಿತ ಮಿಥ್ಯ ಕಾಂಗ್ರೆಸ್ಸಿಗರು ಸಂಜಯರವರಿಗೆ ಜೈಕಾರ ಮಾಡಿ, ಇಂದ್ರ-ಚಂದ್ರ ನೆಂದು ಹೊಗಳಿ, ಪ್ರಮುಖ ಸ್ಥಾನಗಳನ್ನು ಗಳಿಸಿಕೊಂಡರು. ರಾಷ್ಟ್ರ ದಲ್ಲಿ ಕಳ್ಳ ಸಾಗಾಣಿಕೆ, ಲಂಚಗುಳಿತನ, ಕಳ್ಳಪೇಟೆ ವ್ಯಾಪಾರ, ಗೂಂಡಾ ಗಿರಿ, ಕಾನೂನು ಭಂಗ, ಅಶಾಂತಿ ತುಂಬಿ ತುಳುಕಿ ಸಾಮಾನ್ಯ ಜನ ಜೀವನ ದುರ್ಭರವಾಯಿತು.

ದೇಶಪ್ರೇಮಿಗಳು ಜಯ ಪ್ರಕಾಶ ನಾರಾಯಣರವರ ನಾಯಕತ್ವದಲ್ಲಿ ರಾಷ್ಟ್ರ ದುರಾಳಡಿತವನ್ನು ಖಂಡಿಸಿದರು. ತುರ್ತು ಪರಿಸ್ಥಿತಿ ಘೋಷಿ ಸಲ್ಪಟ್ಟು, ಎದುರು ರಾಜಕಾರಣಿಗಳುಸೆರೆಹಿಡಿಯಲ್ಪಟ್ಟರು. ಸಂಸತ್ತಿನ ವಿಧಾನಸಭೆಯ ಕಾಂಗ್ರೆಸ್ ಸದಸ್ಯರುಗಳು ಮೂಕಪ್ರೇಕ್ಷಕರಾದರು. ಬುದ್ಧಿಹೀನರೆಂಬ ಬಿರುದು ಪಡೆದರು. ಜೀವಂತ ರಾಜಕಾರಣಿಗೆ-ಇರ ಬೇಕಾದ ದೇಶಭಕ್ತಿ, ಕೆಚ್ಚು, ಜವಾಬ್ದಾರಿ, ಹುರುಪು, ಹಮ್ಮು, ಬಿಮ್ಮಾನ ಮಾಯವಾಗಿತ್ತು. ಪತ್ರಿಕಾಕರ್ತರು, ಬುದ್ಧಿಜೀವಿಗಳು ಕೈಗಾರಿಕೊದ್ಯಮಿಗಳು, ಬಾಯಿಲ್ಲದವರಾದರು. ನಾಯಕತ್ವವಿಲ್ಲದ ಸಾಮಾನ್ಯರೆಲ್ಲ ಸತ್ತವರಂತೆ ನಿಶ್ಶಬ್ದರಾದರು. ಆದರೂ ಮದ ಮತ್ತ ರಾದ ಇಂದಿರಾಜಿಗೆ ಮತದಾರರು ಮತಿ ತಂದರು. ಜನಸ್ಥೋಮದ ನಿರ್ಧಾರ ದೈವ ನಿರೂಪಣೆ. ಜ್ಞಾನಿಗಳು ಜಾಗರೂಕರಾಗುತ್ತಾರೆ.

ಇಂದಿರಾಗಾಂಧಿಯವರು 1977ರಿಂದ 1980ರವರೆವಿಗೂ ಅಜ್ಞಾತ ವಾಸದಲ್ಲಿದ್ದರು. ಇಂದಿರಾಗಾಂಧಿಯವರ ಪರಾಭವ ರಷ್ಯಾಕ್ಕೆ ಅಸಂತೋ ಷವನ್ನು ಅಮೇರಿಕಾಕ್ಕೆ ಸಂತಸವನ್ನು ತಂದಿತು. ಜನತಾ, ಜನಸಂಘ ಮತ್ತು ಪ್ರಜಾತಂತ್ರ ಕಾಂಗ್ರೆಸ್ ಮೂರು ಸೇರಿ ಸರ್ಕಾರ ರಚಿಸಿತು. ಜಯಪ್ರಕಾಶ್ ನಾರಾಯಣರ ಸಲಹೆಯಂತೆ ಮುರಾರ್ಜಿ ದೇಸಾಯಿ ಪ್ರಧಾನಿಯಾದರು. ಪ್ರಧಾನಿಯಾಗಲು ಕಾಯುತ್ತಿದ್ದ ಚರಣಸಿಂಗರು ಮತ್ತು ಜಗಜೀವನರಾಮ್‌ರವರು ಎರಡು ವರ್ಷಗಳ ಕಾಲ ಒಳಜಗಳ ನಡೆಸುತ್ತ ಬಂದರು. ಪ್ರಾಮಾಣಿಕ ಮತ್ತು ಶಿಸ್ತಿನ ಸಿಪಾಯಿಯಾದ

ಮುರಾರ್ಜಿ ಬೇಜಾರಾಗಿ 27-7-1979ರಲ್ಲಿ ರಾಜೀನಾಮೆ ಕೊಟ್ಟರು. ಕಾಯುತ್ತಿದ್ದ ಸಂಜಯರು ಮತ್ತು ಇಂದಿರಾಗಾಂಧಿಯವರ ಬೆಂಬಲ ದಿಂದ ಚರಣಸಿಂಗರು ಪ್ರಧಾನಿಯಾದರು. ಅಧಿಕಾರಕ್ಕೆ ಕಾಯುತ್ತಿದ್ದ ಇಂದಿರಾಜಿ ಬೆಂಬಲ ವಾಪಸ್ಸು ಪಡೆದರು. 3-1-1980ರಲ್ಲಿ ಹೊಸ ಚುನಾವಣೆ ನಡೆದು, ಕಾಂಗ್ರೆಸ್ ಪಕ್ಷ ಗೆದ್ದು, ಇಂದಿರಾಗಾಂಧಿ ಯವರು ಗಾಧಿಗೇರಿದರು. ಆಡಳಿತ ವೈಖರಿ, ನಿರೀಕ್ಷಿಸಿದಷ್ಟು ನಿರ್ಮಲ ವಾಗಲಿಲ್ಲ ಅಂಧ ಧೃತರಾಷ್ಟ್ರನ ಮಗ, ಸೊಕ್ಕಿನ ದುರ್ಯೋಧನ ಮಾಡಿದ ಅನ್ಯಾಯ, ಅಪಚಾರ ಮತ್ತು ಅಪರಾಧಗಳನ್ನೆಲ್ಲ ಖಂಡಿಸಲಸಕ್ತನಾದ ಹಾಗೆ, ತಾಯಿ ಇಂದಿರಾಗಾಂಧಿಯವರು ಸಂಜಯರವರ ಅವ್ಯವಹಾರಗಳ ಬಗ್ಗೆ ಅಂಧರಾಗಿದ್ದರು. ಈ ಸಂದಿಗ್ಧ ಮಜಲಿನಲ್ಲಿ, ಸಂಜಯಗಾಂಧಿ ಗುಂಪಿನ ಅಪಕ್ವ, ಸ್ವಾರ್ಥ ಮತ್ತು ಅಧಿಕಾರ ದಾಹದ ಯುವಕರು ಸಂಸತ್ತಿನ ಕಾಂಗ್ರೆಸ್ ಸದಸ್ಯರಾದರು. ಇದೇ ಸಮಯದಲ್ಲಿ ರಷ್ಯಾದ ಒಂದು ಲಕ್ಷ ಸೈನಿಕರು ಆಯಕಟ್ಟಿನ ಅಫ್‌ಘಾನಿಸ್ತಾನವನ್ನು ಆಕ್ರಮಿಸಿ ಕೊಂಡರು. ಇಂದಿರಾ ಮೂಕ ಪ್ರೇಕ್ಷಕರಾದರು. ಈ ಸದವಕಾಶ ವನ್ನು ಉಪಯೋಗಿಸಿಕೊಂಡು ಅಮೇರಿಕನ್ನರು, ಪಾಕಿಸ್ತಾನವನ್ನು ರಕ್ಷಣಾ ತರಬೇತಿ, ಯುದ್ಧ ಅಸ್ತ್ರಗಳಿಂದ, ಆರ್ಥಿಕ ನೆರವುಗಳಿಂದ ಪ್ರೋತ್ಸಾಹಿಸಿ, ದೊಡ್ಡ ಕಂಟಕವನ್ನು ನಿರ್ಮಿಸಿದರು. ಪಂಜಾಬಿನಲ್ಲಿ ಜಮ್ಮು ಕಾಶ್ಮೀರದಲ್ಲಿ ಮತ್ತು ದೇಶದ ಅನೇಕ ಭಾಗಗಳಲ್ಲಿ ಭಯೋತ್ಪಾ ದನೆಗಳನ್ನು ಹುಟ್ಟುಹಾಕಿದರು. ಪೂರ್ವ ಪಾಕಿಸ್ತಾನವನ್ನು ಇಂದಿರಾ ಗಾಂಧಿಯವರ ಸಹಾಯದಿಂದ ಕಳೆದುಕೊಂಡಿದ್ದ ಪಾಕಿಸ್ತಾನ, ತನ್ನ ಶಕ್ತಿಯನ್ನು ಮತ್ತಷ್ಟು ಹರಿತ ಮಾಡುತ್ತಾ ಬರುತ್ತಿದೆ.

ವಿದ್ಯಾನಂತರ ನಾಡಾದ ಅಸ್ಸಾಂಅನ್ನು ಒಡೆದು ನಾಗಾಲ್ಯಾಂಡ್, ಮೇಘಾಲಯ ಮತ್ತು ಮಿಜೋರಾಂ ಎಂಬ ಬೇರೆ ಪ್ರಾಂತ್ಯಗಳನ್ನಾಗಿ ಮಾಡಿದರು. ಅಸ್ಸಾಂ ವಿದ್ಯಾರ್ಥಿ ಸಂಘ ಮೇಲುಗೈ ಸಾಧಿಸಿತು. ಪೂರ್ವ ಪಾಕಿಸ್ತಾನದಿಂದ ವಲಸೆ ಬಂದ ಮುಸ್ಲಿಂರ ಪ್ರಶ್ನೆ ಇತ್ಯರ್ಥ ವಾಗದೆ, ದೊಡ್ಡ ತಲೆನೋವಾಗಿ ಮುಂದುವರಿಯುತ್ತಿದೆ. ಅವರೆಲ್ಲ

ಕಾಂಗ್ರೆಸ್ಸಿನ ಮತ ಪೆಟ್ಟಿಗೆ ಎಂಬ ಆಸೆಯಿಂದ ತಾಳ್ಮೆ ವಹಿಸಲಾಗಿದೆ ಎಂಬ ಆಪಾದನೆ ಬಲವಾಗಿದೆ ಆರ್ಥಿಕ ಪರಿಸ್ಥಿತಿ ಸಂಪೂರ್ಣ ಹದಗೆಟ್ಟಿತು. ಅದನ್ನು ಉತ್ತಮಪಡಿಸುವುದರ ಬದಲಾಗಿ, ಏಶಿಯಾಡ್, ನ್ಯಾಮ್ ಜೊಗ್ಗೆ ಮುಂತಾದ ವ್ಯವಹಾರಗಳಲ್ಲಿ ಕಾಲ ಕಳೆಯಲಾಯ್ತು.

ಪಂಜಾಬ್ ಸಮಸ್ಯೆಯನ್ನು ನುರಿತ ಪ್ರವೀಣರ ಚತುರತೆಯಿಂದ ಬಗೆಹರಿಸುವುದಕ್ಕೆ ಬದಲಾಗಿ, ತನ್ನ "ಎಳೆ ಹುಡುಗರಿಗೆ ಯಜಮಾನಿಕೆ ಕೊಟ್ಟಾಗ ಒಡೆಗದ್ದೆ ಕುಯ್ಸಿ ಮೆದೆ ಹಾಕಿದಂತೆ" ಸಂಜಯರು, ರಾಜೀವರು, ಜೈಲ್ ಸಿಂಗರು ಸಮಸ್ಯೆಯನ್ನು ಉಲ್ಬಣಗೊಳಿಸಿದರು. ಅಕಾಲಿದಳದ ಪ್ರಾಂತ್ಯ ಸರ್ಕಾರ ಉರುಳಿಸುವ ಆತುರದಲ್ಲಿ, ಅಪ್ಪಟ ಮತಾಂಧ, ನಂಗೆಕೋರ ಮತ್ತು ಭಯೋತ್ಪಾದಕರ ಪಿತೃವಾದ ಭಿಂಡರವಾಲರನ್ನು ಮುಂದೆ ತಂದು, ಸರ್ವವೂ ನಾಶವಾಯ್ತು. ಜೊತೆಗೆ ಆಂಧ್ರಪ್ರದೇಶದಲ್ಲಿ ಮತ್ತು ಜಮ್ಮು ಕಾಶ್ಮೀರದಲ್ಲಿ ಪ್ರಜಾಪ್ರಭುತ್ವಕ್ಕನುಸಾರ ಬಹುಮತಗಳಿಸಿ ಸ್ಥಾಪಿಸಿದ್ದ ಎನ್. ಟಿ. ರಾಮರಾಯರನ್ನು, ಫರೂಕರನ್ನು ಪದಚ್ಯುತಗೊಳಿಸುವ ವಿಫಲ ಯತ್ನದಲ್ಲಿ ಕೇಂದ್ರಸರ್ಕಾರ ತನ್ನ ಮಾನ-ಮರ್ಯಾದೆ ಮತ್ತು ಘನತೆಗಳನ್ನು ಸಂಪೂರ್ಣವಾಗಿ ಕಳೆದುಕೊಂಡಿತು. ತಂದೆ, ತಾತ, ಪತಿ, ತಮ್ಮನ್ನು ತಾವೇ ಮಾತೃಭೂಮಿಗಾಗಿ ಸಮರ್ಪಣೆ ಮಾಡಿಕೊಂಡ ವೀರ, ವಿಭೂತಿ ಪುರುಷರು. ಪ್ರಜಾಪ್ರಭುತ್ವದ ಶಿಲ್ಪಿ ಮತ್ತು ಸಮಸ್ಥಿತಿ ಸ್ಥಾಪಕರ ಸಂತತಿಯ ಪುತ್ರಿ, ರಷ್ಯಾದ ಪರೋಕ್ಷ ಚಿತಾವಣೆಗೆ ಒಳಗಾದರು ರಾಷ್ಟ್ರದ ಅದೃಷ್ಟ ಚೆನ್ನಾಗಿತ್ತು. ಪವಿತ್ರ ಭಾರತಭೂಮಿ ಕಮ್ಯೂನಿಸ್ಟ್ ಪ್ರಪಂಚದ ಉಪಗ್ರಹವಾಗಲಿಲ್ಲ ದೊರೆತ, ಹಲವಾರು ಅವಕಾಶಗಳನ್ನು ಸಾರ್ಥಕಪಡಿಸಿಕೊಳ್ಳಲಿಲ್ಲ. ಪುತ್ರನಿಗೆ ಪ್ರಧಾನಿ ಪಟ್ಟ ಕಟ್ಟುವ ಕನಸು ಕಾಣುತ್ತಿದ್ದ ತಾಯಿಗೆ, ಸಂಜಯರ ಅಕಾಲ ಮರಣದ ಪುತ್ರಶೋಕ ಪ್ರಾಪ್ತಿಯಾಯ್ತು. ತಾನು, ತನ್ನದು, ತನ್ನ ವಂಶ, ತನ್ನ ರಕ್ತ ಎಂಬ ವ್ಯಾಮೋಹದ ಆಕರ್ಷಣೆಯ ಸೆಳೆತದಿಂದ ತಪ್ಪಿಸಿಕೊಳ್ಳಲು ಅಶಕ್ತರಾದರು. ಆಘಾತಗೊಂಡ ಅವ್ವ, ಪಾಠ ಕಲಿಯಲಿಲ್ಲ. ವಿವೇಚನೆ

ಉದಯವಾಗಲಿಲ್ಲ. ಜೇಷ್ಟ ಪುತ್ರ ರಾಜೀವರ ಬೆನ್ನು ಹತ್ತಿದರು. ಒಂದು ಪುಣ್ಯ, ರಾಜೀವ್‌ಗಂಧಿಯವರ ದುರ್ಮರಣದ ಧಕ್ಕೆಗೊಳಗಾಗದೆ ತಾವೇ ತಮ್ಮ ಬೆನ್ನುಗಾವಲುಕಾರರ ಕೋಪಕ್ಕೆ 31-10-84ರಲ್ಲಿ ತುತ್ತಾದರು.

ನಮ್ಮ ಪುರಾಣಗಳು ಇತಿಹಾಸ ಸತ್ಯ. ಅವು ಈಚಿನ ಸಮಕಾಲೀನದ, ಭಾರತವ್ದೆ ಅಲ್ಲ ಇಡೀ ವಿಶ್ವದ ರಾಜಕೀಯ ದೌಲತ್ತುಗಳನ್ನು ಪ್ರತಿಬಿಂಬಿಸುತ್ತವೆ. ಅಂದು ನಡೆದ ಘಟನೆ ಇಂದೂ ಅದೇ ಸಂದರ್ಭ ಅವಕಾಶಗಳಲ್ಲಿ ತಪ್ಪದೆ ನಡೆಯುತ್ತಿದೆ ಆ ವಾಸ್ತವಾಂಶ, ಸರ್ವಕಾಲಕ್ಕೂ ಅನ್ವಯಿಸುತ್ತದೆ. ವಸ್ತುಸ್ಥಿತಿ - ರಾಷ್ಟ್ರ, ನಾಡು, ಸಂಸ್ಥೆ, ತನ್ನ ಒಬ್ಬನ ತನ್ನ ಸಂಸಾರದ, ತನ್ನ ವಂಶದ, ಪ್ರತ್ಯೇಕ, ಸ್ವಂತ ಸ್ವತ್ತು, ಇತರ ಪಾಲು, ತಮ್ಮ ಎಂಜಲು ಮಾತ್ರ ಎಂಬ ಮನೋಭಾವ ತಳೆದ ಅನಾಚಾರದ ಚಕ್ರವರ್ತಿ, ರಾಜ, ಮಹಾರಾಜ, ಸರ್ವಾಧಿಕಾರಿಗಳು, ಪಾಳೇಗಾರರು, ಪ್ರೋಜಾರಿಗಳು, ಮಠಾಧಿಪತಿಗ ು ಎಲ್ಲಾ ಹಂತದ ಪ್ರಜಾಪ್ರತಿನಿಧಿಗಳು ನಿರ್ನಾಮವಾಗಿದ್ದಾರೆ. ಅನಾಮಧೇಯರಾಗಿದ್ದಾರೆ ಅನಾಮಿಕರಾಗಿದ್ದಾರೆ, ಅನಾಹುತಕ್ಕೀಡಾಗಿದ್ದಾರೆ. ಅವರ ವಂಶೀಕರು ಹೆಸರಿಲ್ಲದವರಾಗಿದ್ದಾರೆ. ಕುಷ್ಠರೋಗಿಗಳಾಗಿ ತಿರುಪೆ ಎತ್ತಿದ್ದಾರೆ. ಸಮಾಜಘಾತುಕರಾಗಿ, ನಿತ್ಯ ಅಪರಾಧಿಗಳಾಗಿ ಕೊಳೆಯುತ್ತಿದ್ದಾರೆ. ಸಾರ್ವಜನಿಕ ಸ್ವತ್ತು ಬೆಂಕಿಯ ಸಮಾನ ನಿಸ್ವಾರ್ಥತೆಯಿಂದ, ಬುದ್ಧಿವಂತಿಕೆಯಿಂದ, ಪಾಲುಗಾರ, ಸಹಭಾಗಿತ್ವ, ರಕ್ಷಕ ಎಂಬ ಮನೋಭಾವ ಹೊಂದಿ ಆತ್ಮಪೂರ್ವಕವಾಗಿ ವರ್ತಿಸಿದ, ವಿರಳವಾದ ಪುಣ್ಯಾತ್ಮರು ವಂಶ ಪಾರಂಪರ್ಯ ಸುಖಿಗಳಾಗಿ ಗೌರವ ಪಡೆದು, ಆನಂದದಿಂದ ಬದುಕಿದ್ದಾರೆ. ತಮ್ಮ ಬುದ್ಧಿ, ಶಕ್ತಿ, ವಿತ್ತ ಸರ್ವವನ್ನು ಸರ್ವರ ಹಿತಕ್ಕಾಗಿ ಮುಡಿಪಿಟ್ಟಾಗ ಮಾತ್ರ, ಮಾನವನಿಗೆ, ಮಾನ್ಯತೆ, ಧನ್ಯತೆ, ಶ್ರೇಷ್ಠತೆ ಲಭಿಸುವುದು.

ಇಲ್ಲಿ ಇಂದಿರಾಗಾಂಧಿ ಒಬ್ಬರನ್ನೇ ದೂಷಿಸುವುದು ಅಪಚಾರ. ಧೃತರಾಷ್ಟ್ರನ ದರ್ಬಾರಿನಲ್ಲಿ ದ್ರೋಣ, ಭೀಷ್ಮ, ಕರ್ಣ ಮುಂತಾದ

ಪ್ರಖ್ಯಾತ ವಿಭೂತಿ ಪುರುಷರು, ಅನ್ನದ ಋಣಕ್ಕಾಗಿ ಬಾಯಿ ಮುಚ್ಚಿಕೊಂಡಿದ್ದರು. ಅದರಂತೆ ಎಲ್ಲಾ ಹಂತಗಳಲ್ಲೂ ಚುನಾಯಿತ ಪ್ರತಿನಿಧಿಗಳು ಕೈಗೊಂಬೆಗಳಾಗಿ, ಬುದ್ಧಿ ಅಡವಿಟ್ಟು ನಪುಂಸಕರಾಗಿದ್ದರು.

ನಾನೆಂಬುದಿಲ್ಲದ ಪೂರ್ಣ ತ್ಯಾಗಸೇವೆಯೇ ಪ್ರಜಾತಂತ್ರದ ಸೊಬಗು. ಅನಾಸಕ್ತಿ, ಆತ್ಮ ಸಂಯಮ, ಸ್ವಾಭಿಮಾನ, ಸಮಾನತೆ, ದಕ್ಷತೆ ಪ್ರಜಾಪ್ರಭುತ್ವದ ಸೋಪಾನಗಳು. ಸ್ವಾರ್ಥತೆ, ಮತ್ಸರ, ಕಾಲಹರಣ ಪ್ರಜಾತಂತ್ರದ ಅಂತ್ಯ. ಹಕ್ಕುಗಳಿಂದ ಹೊಣೆಗಾರಿಕೆಯ ಮೊಟಕು ಇಂದಿನ ಭಾರತದ ಪ್ರಜಾತಂತ್ರದ ಪರಿತಾಪ.

ರಾಜೀವ್‌ಗಾಂಧಿಯವರು : ತೃಪ್ತಿ ಮನೋಭಾವದ, ಉಚ್ಚ ಸಂಸ್ಕೃತಿಯ, ಶ್ರೀಮತಿ ಸೋನಿಯಾಗಾಂಧಿಯವರ ಪ್ರಭಾವದಿಂದ ಚಕ್ರವಾಕ ಪಕ್ಷಿಗಳಂತೆ ನಲಿದಾಡುತ್ತಿದ್ದ, ಮುಗ್ಧ, ಸುಂದರ ರಾಜೀವರನ್ನು, ರಾಜಕೀಯ ರಣಹದ್ದುಗಳು, ತಮ್ಮ ಹೊಲಸಿಗೆ ಒಲ್ಲೈಸಿಕೊಳ್ಳುವುದರಲ್ಲಿ ಜಯಶೀಲರಾದರು. ಎರಡು ದಶಕಗಳ ರಾಜಕೀಯ ರಂಗಿನ ಸೆಳೆತವನ್ನು ವಿಷದಂತೆ ವರ್ಜಿಸಿದ್ದ ಮಾಯುಯಾವದ, ನಿಷ್ಕಪಟ ರಾಜೀವರು – ಸ್ವಾರ್ಥಿಗಳ, ಹೊಗಳುಭಟ್ಟರ, ಪರೋಪಜೀವಿಗಳ ಮತ್ತು ದೇಶದ್ರೋಹಿಗಳ ಬಲೆಗೆ ಬಿದ್ದರು.

ಅರ್ಜುನ ಕುರುಕ್ಷೇತ್ರದಲ್ಲಿ, ತನ್ನ ಬಂಧು ಬಾಂಧವನರನ್ನು ವೈರಿಸ್ಥಾನದಲ್ಲಿ ಗುರ್ತಿಸಿ, ಧೃತಿಗೆಟ್ಟು, ದಿಗ್ಭ್ರಮೆಗೊಂಡು, ದುಃಖಕ್ಕೆ ಒಳಗಾಗಿ, ಕರ್ತವ್ಯವಿಮುಖನಾದ ಅಂತೆಯೇ ಕಿರೀಟಪ್ರಾಯರಾದ ರಾಷ್ಟ್ರಪತಿ ಸಂಸದೀಯ ಸದಸ್ಯರು, ಸಂವಿಧಾನ ಸಂರಕ್ಷಕರು, ಅರ್ಜುನನಂತೆ, ನಿರ್ಣಾಯಕ, ಸಂದಿಗ್ಧ ಸಮಯದಲ್ಲಿ ವಿವೇಚನಾರಹಿತರಾದರು. ಇಂದಿರಾಗಾಂಧಿಯವರ ಅಕಾಲ ಮರಣದಿಂದ ಖಿನ್ನರಾಗಿ ಪ್ರಜಾತಂತ್ರದ ಕಟ್ಟಳೆಗಳನ್ನು ಗಾಳಿಗೆ ತೂರಿ, ಮರುಘಳಿಗೆಯಲ್ಲೇ, ರಾಜ್ಯಭಾರದ ದೀರ್ಘ ಅನುಭವವಿಲ್ಲದ ರಾಜೀವಗಾಂಧಿಯವರನ್ನು ಸಮುಸ್ಯೆಗಳ ಕೂಪದ ರಾಷ್ಟ್ರಕ್ಕೆ ಪ್ರಧಾನಿಯನ್ನಾಗಿ ಪಟ್ಟ ಕಟ್ಟಿದರು. ಹಿಂದೆ ಚಕ್ರಾಧಿಪತಿಗಳ

ಸಿಂಹಾಸನವನ್ನು, ಅವರ ಹಸುಳೆ ಅಲಂಕರಿಸುತ್ತಿದ್ದಂತೆ, ರಾಜೀವರನ್ನು ಹಿಡಿದು ಕೂರಿಸಿದರು.

ಆದರೂ ರಾಜೀವ್ ಗಾಂಧಿಯವರು ತಮ್ಮ ವಿಮಾನ ಚಾಲಕ ಸಾಮರ್ಥ್ಯತೆಯ, ಅನುಭವದ ಶಿಸ್ತು, ಸಾಧನೆ ಮತ್ತು ಸಂಯಮಗಳಿಂದ ರಾಜಕೀಯವನ್ನು ಶುಭ್ರಗೊಳಿಸುವ ದೃಢ ನಿರ್ಧಾರ ಮತ್ತು ನಿಷ್ಠೆಯನ್ನು ಪ್ರದರ್ಶಿಸಿದರು. ರಾಜಕೀಯ ದಳ್ಳಾಳಿಗಳನ್ನು ಧ್ವಂಸಮಾಡಿ ಉಚ್ಚ ಸ್ಥಾನಗಳಿಗೆ ಅಂಟಿಕೊಂಡಿರುವ ಭ್ರಷ್ಟತೆಯನ್ನು ಉಚ್ಚಾಟಿಸಗೊಳಿಸುವೆನೆಂದು ಗುಡುಗಿದ ಗಂಡೆದೆಯ ರಾಜೀವರನ್ನು ಜನ ಆನಂದದಿಂದ 'ಶ್ರೀಮಾನ್ ಶುಭ್ರ-ನಿರ್ಮಲ' ಎಂಬ ಅಡ್ಡ ಹೆಸರಿಟ್ಟು ಅಪ್ಪಿಕೊಂಡರು ವಿ ಪಿ ಸಿಂಗ್ ರಂಥ ಪ್ರಾಮಾಣಿಕ ಮಂತ್ರಿಗಳಿಗೆ, ನೆರವು ಮತ್ತು ಉತ್ತೇಜನಕೊಟ್ಟು, ರಾಷ್ಟ್ರಬಂಢಾರದ ಕೊಳ್ಳೆಗಾರರನ್ನು ಹತೋಟಿತರುವುದರಲ್ಲಿ ದಿಟ್ಟ ಹೆಜ್ಜೆ ಮುಂದಿಟ್ಟರು. ಪ್ರಜಾತಂತ್ರದ ಮತ್ತು ಆಡಳಿತ ವ್ಯವಸ್ಥೆಗಳಲ್ಲಿ ನ್ಯಾಯನೀತಿ ಎತ್ತಿ ಹಿಡಿಯುವುದಕ್ಕೆ ಮುನ್ನುಗ್ಗುತ್ತಿದ್ದರು. ಶಾಂತಿಯುಗಿದ್ದ, ಭಾರತದ ಭಾಗ್ಯತಾರೆ ಉದಯವಾಗುತ್ತಿದೆ ಎಂಬ ಭರವಸೆಯು ಬುಗ್ಗೆ ಉಕ್ಕುತ್ತಿತ್ತು. ಸಾಮಾನ್ಯ ಸಂಪರ್ಕಕ್ಕೂ ಉತ್ಸುಕರಾಗಿದ್ದರು. ಈ ಗ್ರಂಥಕರ್ತನ ನೂರಾರು, ಆತ್ಮೀಯ ನಿಸ್ವಾರ್ಥ ಪತ್ರವ್ಯವಹಾರಗಳಿಗೆ ಆನಂದಾಸಕ್ತಿಯಿಂದ ಸ್ಪಂದಿಸಿದರು. ಇದು ಅಸಾಧಾರಣ ಅನುಗ್ರಹ-ಶ್ರೇಷ್ಠ ಗುಣವಿಶೇಷ. ರಾಜಕೀಯ ಪ್ರಭಾವಸ್ಥರಲ್ಲಿ ಇಂಥ ಗುರುತರದ ಹಿರಿಮೆ, ಪೂರ್ಣ ಅಭಾವ. ರಾಜೀವರು ರಾಷ್ಟ್ರಪ್ರಜೆಯ ಮತ್ತು ಮತದಾರನ ಸ್ವಾಮ್ಯ, ಪಾರಮ್ಯ ಮತ್ತು ಆಜನ್ಮ ಹಕ್ಕನ್ನು ಸ್ಪಷ್ಟವಾಗಿ ಗ್ರಹಿಸಿದ್ದರು. ಅಭಿನಂದನೆ ಮತ್ತು ಶ್ಲಾಘನೆಗಳ ಜೋಡಿಯಲ್ಲಿ, ಅವರು ಎಡವಿದಾಗ, ಪ್ರೀತಿ ಗೌರವಗಳಿಂದ ಕೊಟ್ಟ ಎಚ್ಚರಿಕೆಯನ್ನು ಅಧಿಕಾರ ಅಹಂನಿಂದ ನೋಡಲಿಲ್ಲ ಕಹಿಯಾದರು ಉತ್ತರ ಕೊಟ್ಟಿದ್ದಾರೆ. ಬರೆದ ಕೆಲವು ವಿಷಯಗಳನ್ನು ಮುಂದಿಟ್ಟಿದ್ದೇನೆ.

೧. ಹಿಮಾಚಲ ಪ್ರದೇಶದ ಕಾಂಗ್ರೆಸ್ ಅಧ್ಯಕ್ಷರು, ಶ್ರೀಮತಿ ಸೋನಿಯಾಗಾಂಧಿ ಅವರ ಹುಟ್ಟು ಹಬ್ಬವನ್ನು ಕಾಂಗ್ರೆಸ್ಸು ಸದಸ್ಯರೆಲ್ಲ ಆಚರಿಸಿ, ಎಂಬ ಆದೇಶದ ಬಗ್ಗೆ- ತಾರೀಖು 8 - 11 - 1986 ರಲ್ಲಿ ಸೋನಿಯಾಗಾಂಧಿಯವರಿಗೆ, ಈ ಹೊಗಳು ಭಟ್ಟರ ಬಲೆಗೆ ಬೀಳಬೇಡಿ ಎಂದು ಬರೆದೆ. ಅವರು ಉತ್ತರವಾಗಿ, ನಮಗೆ ಅದರ ವಿಚಾರವೇ ಗೊತ್ತಿಲ್ಲ. ಅಂಥ ಆಚರಣೆಗಳು ತಮಗೆ ಅನಾವಶ್ಯಕ ಎಂದು ಬರೆದರು.

೨ ದಕ್ಷಿಣ ಆಫ್ರಿಕದ ಬಿಳಿಯ ಸರ್ಕಾರ, ಸ್ಥಳೀಯ ಎಳೆಮಕ್ಕಳಿಗೂ ಕೊಡುತ್ತಿದ್ದ ಕ್ರೂರ ಹಿಂಸೆಯ ವಿಚಾರವಾಗಿ ಸೋನಿಯ ಗಾಂಧಿಯವರಿಗೆ 9 - 12 - 1986 ರಲ್ಲಿ ಬರೆದೆ. ಅವರು ಅದಕ್ಕುತ್ತರವಾಗಿ, ತಾವು ಈ ದೇಶದಲ್ಲಿ ಆಗಲೇ ಅನೇಕ ಅಂತರಾಷ್ಟ್ರೀಯ ಸಂಸ್ಥೆಗಳ ಮೂಲಕ ಈ ಮಹತ್ವವಾದ ವಿಚಾರವನ್ನು ಗಂಭೀರವಾಗಿ ಕೈಗೊಂಡಿರುವುದಾಗಿ ತಿಳಿಸಿದರು.

೩. 19-12-86 ಪತ್ರದ ಮೂಲಕ, ರಾಜೀವ್ ಗಾಂಧಿ ಮತ್ತು ಸೋನಿಯಾಗಾಂಧಿ, ಇಬ್ಬರು, ಆ ಸಮಯದಲ್ಲಿ ಶಸ್ತ್ರ ಚಿಕಿತ್ಸೆಗಾಗಿ ಶಿಶ್ರೂಷೆ ಪಡೆಯುತ್ತಿದ್ದ, ನನಗೆ ಬೇಗನೆ ಗುಣವಾಗಲಿ ಎಂದು ಆರೈಸಿ, 1987 ಸಾಲಿನ ಶುಭಾಶಯವನ್ನು ಕೋರಿದ್ದರು

೪. ನಾನು ಪ್ರತಿಯಾಗಿ 1987 ನೇ ಸಂವತ್ಸರದ ಶುಭಾಶಯವನ್ನು ಈ ರೀತಿ ಬರೆದೆ "ಫಲಾಪೇಕ್ಷೆಯ ಅಂಜಿಕೆ-ಆತಂಕಗಳಿಲ್ಲದೆ ಶ್ರಮದಿಂದಲೇ ಅಭ್ಯುದಯ ಸಾಧ್ಯ" ಅಲ್ಲದೆ, ಹತ್ತಿ ಉರಿಯುತ್ತಿದ್ದ ಪಂಜಾಬಿನ ವಿಚಾರವೂ ಬರೆದೆ.

"ಶಾಸ್ತ್ರಾಂಧತೆಯ ಮತ್ತು ಮತ ಮೌಢ್ಯತೆಯ ಪ್ರತ್ಯೇಕವಾದವನ್ನು, ಸಿಕ್ ಯುವಕರ, ಕಿವಿಗೆ, ಬಿಡದೆ ನಿರಂತರ ಊದಿ, ಅಡ್ಡದಾರಿಗೆಳೆದು, ಅವರು ಗೊತ್ತುಗುರಿಯಿಲ್ಲದೆ ಹಿಂಸಾಚಾರಿ

ಗಳಾಗಿದ್ದಾರೆ. ಅಡಗಿದ ಮತ್ತು ತಡೆಗಟ್ಟಿದ ಯುವ ಚೈತನ್ಯ, ಧ್ವಂಸ ಮತ್ತು ಸರ್ವನಾಶದ ಜಾಡಿನಲ್ಲಿ ಹರಿಯುತ್ತಿದೆ. ರಾಜದಂಢ, ಕ್ಷಮೆ ಮತ್ತು ರಾಜಕೀಯ ಸಂಧಾನಗಳನ್ನು ತಾಳ್ಮೆಯಿಂದ ಮುಂದುವರಿಸಿ, ಈ ನಿತ್ಯಯಾತನೆಯನ್ನು ಕೊನೆಗೊಳಿಸುವ ಶಕ್ತಿ ನಿಮಗೆ ಸಿಗಲಿ. ಜಯಶೀಲರಾಗಿ."

೫. ಶ್ರೀಮಾನ್ ಜ್ಯೋತಿಭಾಸು ಅವರು, ಭಾರತದ ಅಸಾಧಾರಣ ಪುರುಷ. ಅಂಥ ಶ್ರೇಷ್ಠರಲ್ಲಿ, ನೀವು ಕಳೆದುಕೊಂಡಿದ್ದ ಸ್ನೇಹವನ್ನು ಪುನಃಗಳಿಸಿರುವುದು ನಿಮ್ಮ ಹಿರಿಮೆ. ಭದ್ರಪಡಿಸಿ, ಎಂದು 21-1-87 ರಲ್ಲಿ ಬರೆದೆ.

೬. ಅದೇ ದಿನ - ಅಧಿಕಾರ ವರ್ಗದವರ ಭಾವನೆಗಳನ್ನು ಆದರಿಸಿ, ಗೌರವಿಸಿ. ಅವರಲ್ಲಿ ಅನೇಕರು ರಾಷ್ಟ್ರ ನಿರ್ಮಾಣದಲ್ಲಿ ಶ್ರೇಷ್ಠ ಪಾತ್ರ ವಹಿಸಿದ್ದಾರೆ

೭. ಎಕ್ಸ್‌ಪ್ರೆಸ್ ಸಮುದಾಯದ ಮೇಲೆ, ನಡೆಸಿರುವ ಎರಡನೆ ಧಾಳಿ, ಜಾಣ್ಮೆಯುಕ್ತವಲ್ಲ. ಸಹನೆ, ಎಲ್ಲಾ ಸಂದರ್ಭಗಳಲ್ಲೂ ಬಹು ಶ್ರೇಷ್ಠ ಮತ್ತು ಉಪಯುಕ್ತವಾದ ಸಾಧನ. ಪ್ರತಿಕಾರಕ್ಕಿಂತ ಪ್ರತ್ಯುಪಕಾರ ಪವಿತ್ರವಾದುದು. ಮತ್ಸರದ ಶಿಕ್ಷೆಗೊಳಗಾದವರಿಗೆ, ನ್ಯಾಯಾಂಗದಿಂದ ಪರಿಹಾರ ದೊರೆಕೆ ದೊರೆಯುತ್ತದೆ ಎಂದು 2-9-1987 ರಂದು ಬರೆದೆ.

೮ ಮೊನ್ನೆ ತಾವು ಹೈದರಬಾದು ವಾಯು ನಿಲ್ದಾಣದಲ್ಲಿ ಏರ್ಪಾಡಾಗಿದ್ದ ಪತ್ರಕರ್ತಸಭೆ ರದ್ದುಮಾಡಬಾರದಾಗಿತ್ತು ಅಲ್ಲದೆ ಪ್ರಜಾಪ್ರತಿನಿಧಿಗಳ ಸ್ನೇಹದ ಬೇಟಿ ನಿರಾಕರಣೆಯಾಗಬಾರದಾಗಿತ್ತು. ಎಂದು 15-2-88 ರಲ್ಲಿ ಬರೆದೆ. ಜರೂರು ಕಾರ್ಯ ನಿಮಿತ್ತ ಡೆಲ್ಲಿಗೆ ಹೋಗಬೇಕಾಗಿ ಬಂದುದರಿಂದ ಹಾಗೆ ಮಾಡಲಾಯಿತು, ಮತ್ತು ಮಾರನೆಯ ದಿನವೇ ಪತ್ರಕರ್ತರನ್ನು ಸಂದರ್ಶಿಸಿದರು ಎಂದು 3-3-88 ಕಾಗದ ಬಂತು.

೯. ಅನಿಷ್ಟ ಮಾನನಷ್ಟ ಮೊಕದ್ದಮೆಯ ಕಾನೂನನ್ನು ದಯಮಾಡಿ ತಕ್ಷಣ ವಾಪಸ್ಸು ಪಡೆದು ಗೌರವ ಪಡೆಯಿರಿ ಎಂದು 13-9-1988 ರಲ್ಲಿ ಬರೆದೆ. ಇದಕ್ಕೆ ತಾ|| 10-10-88 ಜವಾಬು ಬಂತು. ಈ ಕಾನೂನಿನ ರಾಷ್ಟ್ರೀಯ ಚರ್ಚೆಯಲ್ಲಿ ಭಾಗವಹಿಸಲು ನನ್ನನ್ನು ಆಹ್ವಾನಿಸಿದ್ದರು.

೧೦. ಉತ್ತರ ಕೊರಿಯಾಕ್ಕೆ ಕಳುಹಿಸಿದ್ದ, ಕಾಂಗ್ರೆಸ್ ತಂಡಕ್ಕೆ, ಇನ್ನೂ ಉತ್ತಮರನ್ನು ಆಯ್ದು ಕಳುಹಿಸಬೇಕಾಗಿತ್ತು ಎಂದು 27-6-89 ರಲ್ಲಿ ಬರೆದೆ.

೧೧. 28-6-89 ರಲ್ಲಿ ಈ ರೀತಿ ಬರೆದೆ– ಪಕ್ಷದೊಳಗಿನ ಪ್ರಜಾತಂತ್ರತೆ, ಬರೀ ಘೋಷಣೆಯೊಳಗೆ ಮುಂದುವರಿಯುತ್ತಿದೆ, ಪಕ್ಷ ಅಧ್ಯಕ್ಷರ ಮತ್ತು ಮುಖ್ಯ ಮಂತ್ರಿಗಳ ಆಯ್ಕೆ, ಸರ್ಕಾರಿ ನೌಕರರನ್ನು ನಿಯೋಜಿಸದಂತೆಯೇ ನಡೆಯುತ್ತಿದೆ. ಆ ಶ್ರೇಷ್ಠ ಹುದ್ದೆಯವರಿಗೆ ಇರಬೇಕಾದ, ಘನತೆ, ಮತ್ತು ಸ್ವಾತಂತ್ರ ಸಂಪೂರ್ಣ ಮೊಟಕಾಗಿದೆ.

ಆಡಳಿತ ವೆಚ್ಚ ಕಡಿತ, ಡೆಲ್ಲಿಯಿಂದಲೇ ಪ್ರಾರಂಭವಾಗಬೇಕು.

ಭ್ರಷ್ಟತೆಯ ನಿರ್ಮೂಲ, ಬರೀ ಜನಮೆಚ್ಚಿಕೆಯ ಶ್ರುತ ಪಠನಗಳಾಗಿವೆ.

೧೨. ಸಂಸತ್ತಿನಲ್ಲಿ, ವಾರ್ತ ಪತ್ರಿಕೆಗಳಲ್ಲಿ, ಬೀದಿ ಮೂಲೆ ಮೂಲೆಗಳಲ್ಲಿ ಭೋಪೋರ್ಸ್ ಭ್ರಷ್ಟತೆಯ ಚರ್ಚೆ ಅಲ್ಲದೆ ಬೇರೊಂದಿಲ್ಲ; ಎಂದು ತಾರೀಖು 1-5-87, 29-6-87, 18-9-87 ರಂದು ಬಹು ವಿವರವಾಗಿ ಮನನೊಂದು, ಕಣ್ಣೀರಿಟ್ಟು ಬರೆದೆ - ಅವುಗಳ ತಿರುಳು ಈ ರೀತಿ ಇದೆ :-

ಸತ್ಯವೇ ಶ್ರೇಷ್ಠ ಸಂಪತ್ತು. ಅದರ ಆದಾಯ ಅಪಾರ, ಸತ್ಯದಿಂದಲೇ ಮನೋಶಕ್ತಿ, ನಿರ್ಭಯತೆ, ಮತ್ತು ಮನೋ

ಶಾಂತಿ ಸಾಧ್ಯ. ಸತ್ಯವನ್ನು ಪರಿಣಾಮಶೂನ್ಯಮಾಡಿ ಗೆದ್ದಿರುವ ಜನರು ಇನ್ನೂ ಉಳಿದುಕೊಂಡಿದೆ. ಸತ್ಯವನ್ನು ಗೊಳಿಸುವ ಯತ್ನ ವ್ಯರ್ಥ.

ಸ್ವಾಮಿ – ಸ್ವಾತಂತ್ರ್ಯ ಭಾರತದ ಇತಿಹಾಸದಲ್ಲಿ ಒಂದು ಹಂತ ತಲುಪಿದ್ದೇವೆ. ಇಂದು ಜನಸ್ತೋಮ, ತಮ್ಮ ಪ್ರಧಾನಿ ನಿಜವಾಗಲೂ ದೋಷರಹಿತರು, ನಿರ್ಮಲರು, ಎಂಬ ಕರಾರುವಾಕ್ ರುಜುವಾತಿಗಾಗಿ ಕಾತುರತೆಯಿಂದ ಕಾಯುತ್ತಿದ್ದಾರೆ. ಕಾರಣವಿದ್ದಾಗ, ಪ್ರಜಾ ಪ್ರಭುತ್ವದಲ್ಲಿ, ರಾಷ್ಟ್ರದ ಕಿರೀಟದಾರಿಗಳನ್ನು ದೂಷಿಸುವ ಹಕ್ಕು ಜನಕ್ಕುಂಟು. ತಮ್ಮ ತಪ್ಪನ್ನು ಹೊರ ತೆಗೆದ ಶ್ರೀವಸಾನ್, ಜೇಠ್‌ಮಲಾನಿಯವರನ್ನು ನಾಯಿ ಎಂದು ಕರೆದಿರುವುದು ಅನುಚಿತ. ತಾವು ಅವರ ಕ್ಷಮೆ ಕೇಳುವುದು ಉಚಿತ.

ಸ್ವಾಮಿ - ಕಳೆದ ಹಲವಾರು ತಿಂಗಳುಗಳಿಂದ, ನಿರಂತರದ ಮಳೆಯಂತೆ, ಸುರಿಯುತ್ತಿರುವ ದೋಷಾರೋಪಗಳು ರಾಷ್ಟ್ರಕ್ಕೆ ಸುಯೋಗ ಸೂಚಿತವಲ್ಲ. ದೇಶದ ಘನತೆ ಗಂಭೀರತೆ ಛಿದ್ರವಾಗುತ್ತಿದೆ. ಪ್ರಧಾನಿ ಸ್ಥಾನ ಬಹು ಪವಿತ್ರವಾದುದು. ಅದು ರಾಷ್ಟ್ರದ ಸಂಕೇತ. ದೇಶದ ಪ್ರಧಾನಿಗೆ, ರಾಷ್ಟ್ರಕ್ಕಿಂತ ಹಿರಿದು, ಎತ್ತರದ್ದು ಮತ್ತು ಪ್ರಿಯವು ಆದುದು ಇನ್ನೊಂದಿಲ್ಲ. ರಾಷ್ಟ್ರ ಗೌರವಕ್ಕಾಗಿ, ಸರ್ವರು ಸರ್ವ ಆಹುತಿಗೆ ಸಿದ್ಧರಾಗಬೇಕು. ಎಲ್ಲೋ ಏನೋ ಅಚಾತುರ್ಯ ನಡೆದುಹೋಗಿದೆ. ಅದನ್ನು ಮುಚ್ಚುವ ಪ್ರಯತ್ನ ಅಪ್ರಯೋಜಕ. ನಿಮ್ಮನ್ನು ಶಿಖರಕ್ಕೆ ಏರಿಸಿದ ಜನಸ್ತೋಮದಲ್ಲಿ ವಿಶ್ವಾಸವಿಟ್ಟು, ನಡೆದಿರುವ ಸತ್ಯವನ್ನು ನಿವೇದಿಸಿ. ಅವರು ನಿಮ್ಮನ್ನು ಖಂಡಿತ ಕೈ ಬಿಡರು. ದಯಮಾಡಿ ಧೈರ್ಯಮಾಡಿ.

ಸಂಸ್ಥೆಗಳೇ ಪ್ರಮುಖ ಕಾರಣ. ಈ ವ್ಯಾಪಾರಸ್ಥರು ವಿಪರೀತ ಲಾಭದ ಕೊಳ್ಳೆಹೊಡೆಯುವ ಖದೀಮರು. ಬಡವರ ಹೊಟ್ಟೆ ಬಟ್ಟೆ, ಶಿಶುಗಳ ಹಾಲು, ಮಕ್ಕಳ ವಿದ್ಯಾಭ್ಯಾಸ, ರೋಗಿಗಳಿಗೆ ವೈದ್ಯಕೀಯ ಅನುಕೂಲತೆ, ಮುಂತಾದ ನಿತ್ಯಜೀವನದ ಅವಶ್ಯಕತೆಗಳನ್ನು ಪೂರೈಸಲಾರದ ಬಡರಾಷ್ಟ್ರಗಳು ಕೂಡ, ಇವರಿಗೆ ದೊಡ್ಡ ಗಿರಾಕಿಗಳು. ಸ್ವೀಡನ್ ರಾಷ್ಟ್ರದ ಪ್ರಧಾನಿ ಮುಂತಾದ ಪ್ರಭಾವಶಾಲಿಗಳು ಆ ಸಂಸ್ಥೆಯ ಆಶ್ರಯ ದಾತರು. ಅವರ ವಶೀಕ ಪರರಾಷ್ಟ್ರಗಳ ರಾಜಕೀಯ ಪ್ರಮುಖರಿಗೆ ಪ್ರಭಾವ ಬೀರಿಸಿ, ತಮ್ಮ ವ್ಯಾಪಾರವನ್ನು ಕುದುರಿಸಿಕೊಳ್ಳುತ್ತಾರೆ. ಈ ಕಿತ್ತುಜಟ್ಟಿನ ಸರಕ ಗನ್ನು ಕೊಳ್ಳಲು ನ ರಾಷ್ಟ್ರದ ಶ್ರೇಷ್ಠರಿಗೆ ಒಟ್ಟಾಗಿ, ಗುಟ್ಟಾಗಿ ದಳ್ಳಾಳಿ (ಲಂಚ) ಮುಂಗಡ ಆಕರ್ಷಣೀಯ ವ್ಯವಹಾರ ನಾಡಿಕೆ ಇಂಥ ಬಂದ ಸುಮಾರು [illegible],000 ಕೋಟಿ ರೂಪಾಯಿಯ ಪಿರಂಗಿಗಳ ಸರಬರಾಜಿಗಾಗಿ 1986 ನೇ ಫೆಬ್ರವರಿಯಲ್ಲಿ ಭಾರತ, ಭೋಫೋರ್ಸ್ ಜೊತೆಗೆ ಒಪ್ಪಂದ ಮಾಡಿಕೊಂಡಿತು. ಆಗ ರಾಜೀವ ಗಾಂಧಿಯವರು ಭಾರತ ಪ್ರಧಾನಿ.

1987 ನೇ ಏಪ್ರಿಲ್ 16 ರಂದು, ಸ್ವೀಡನ್ ರಾಷ್ಟ್ರದ ಆಕಾಶವಾಣಿ, 'ಭೋಫೋರ್ಸ್, ಭಾರತೀಯ ಹಿರಿಯ ರಾಜಕಾರಣಿಗಳಿಗೂ, ರಕ್ಷಣಾ ಮುಖ್ಯಸ್ಥರಿಗೂ ಲಂಚಕೊಟ್ಟು ಬೃಹತ್ ರಫ್ತಿನ ವ್ಯಾಪಾರ, ಗಿಟ್ಟಿಸಿ ಕೊಂಡಿದ್ದಾರೆ" ಎಂದು ಇಡೀ ವಿಶ್ವಕ್ಕೆ ಡಂಗೂರ ಹೊಡೆಯಿತು. ಸತ್ಯದ ಕತ್ತು ಹಿಸುಕಿ, ಹುಟ್ಟು ಅಡಗಿಸಲು, ಎರಡು ಸರ್ಕಾರಗಳು ಜೋಡಿಯಾಗಿ ಎದ್ದು ನಿಂತವು ಮುಚ್ಚುವ ಹುಚ್ಚು ಪ್ರಯತ್ನದಲ್ಲಿ ಕೋಟಿ ಕೋಟಿ ಹಣ ಹರಿದು ಹೋಯಿತು. ಈ ದುಸ್ಸಾಹಸದಲ್ಲಿ ಅನೇಕರು ಕೋಟ್ಯಾಧಿಪತಿಗಳಾದರು. ಎರಡು ದೇಶದ ಅನೇಕ ಹಿರಿಯ ರಾಜಕಾರಣಿಗಳ ಮತ್ತು ಅಧಿಕಾರಿಗಳ ಮುಖಕ್ಕೆ ಮಸಿ ಬಳಿಯಲ್ಪಟ್ಟಿತು. "ನಾನಾಗಲಿ, ನನ್ನ ಸಂಸಾರದ ಸದಸ್ಯರಾಗಲಿ ಇದರಲ್ಲಿ ಸಿಕ್ಕಿಬಿದ್ದಿಲ್ಲ". ಎಂದು ರಾಜೀವರು ಪದೇ ಪದೇ ಸಂಸತ್ತಿನಲ್ಲಿ ಹೇಳುತ್ತಾ ಬಂದರು. ಸ್ವಾತಂತ್ರನಂತರ ಬಹು ಬೃಹತ್ ಬಹುಮತ ಗಳಿಸಿದ್ದ ರಾಜೀವರ

ಸರ್ಕಾರ 1989ನೇ ಚುನಾವಣೆಯಲ್ಲಿ ಸೋಲೊಪ್ಪಿತು. ಬಿ.ಜೆ.ಪಿ. ನೆರ
ವಿನ ಹಸ್ತದಿಂದ, ತಿಂಗಳ ವಿ.ಪಿ. ಸಿಂಗ್ ಸರ್ಕಾರ, ಒಂದು ವರ್ಷ
ಜೀವ ತುಂಬಿತು ಎಂದು ಪಕ್ಷ ರಚಿಸಲು ಮಾಡಿದ ಪ್ರಾಮಾಣಿಕ
ಪ್ರಯತ್ನ ಫಲಿಸಲಿಲ್ಲ. ರಾಜೀವ ಗಾಂಧಿಯ ಪರ ಬೆಂಬಲದ ಚಂದ್ರ
ಶೇಖರ ಅವರ ಸರ್ಕಾರದ [illegible] ಜ್ಞಕ್ತಿಗಳು ಅದರ ಕಟ್ಟೆ ಹೋಗಲಿಲ್ಲ.
ಪುನಃ ಬಿ.ಜೆ.ಪಿ. ಬೆಂಬಲದ ಅಲ್ಪಸಂಖ್ಯಾತ ಪಿ.ವಿ. ನರಸಿಂಹರಾಯರ
ಸರ್ಕಾರಕ್ಕೆ ಇದನ್ನು ಕೂಡುತ್ತಿದ್ದ ಪುರುಸೊತ್ತು ಸಿಕ್ಕಿಲ್ಲ. ಸ್ವಲ್ಪ ತೆರೆ
ಎಳೆಯುವ ಪ್ರಯತ್ನ ನಡೆ, ವಿದೇಶ ಮಂತ್ರಿ ಸೋಲಂಕಿಯವರು,
ರಾಜೀನಾಮೆ ನೀಡಿ ಅಜ್ಞಾತವಾಸದಲ್ಲಿದ್ದಾರೆ. 1993ನೇ ಸಾಲಿನ
ರಾಷ್ಟ್ರೀಯ ದುರಂತ, ಬಾಬರಿ ಮಸೀದಿ ಧ್ವಂಸ. ಈ ವಿವಾದದ ವಿವರಣೆ ಅವ
ಸಿಧಿ ಇಲ್ಲ. ಬಗೆ ಬಗೆಯ ಭಾಷೆ, ಹಲವಾರು ಕುಲ ಜಾತಿ, ಜನಾಂಗ,
ವಿವಿಧ ಧರ್ಮಗಳನ್ನೊಳಗೊಂಡ ಸಮಾಜವೇ ಭವ್ಯ ಭಾರತದ
ಸೊಬಗು. ಒಡಲಾಗುವ ಸಹಿಷ್ಣುತೆ ಮತ್ತು ಕಾಲಕ್ಕೆ ಬಾಗುವ ಮತ್ತು
ಹೊಂದಿಕೊಳ್ಳುವ, ಶೋಭಾಯಮಾನವಾದ ಇತಿಹಾಸವಿದೆ ನಮ್ಮ ಈ
ಶ್ರೇಷ್ಠ ಸಮಾಜಕ್ಕೆ. ಇದನ್ನು ಅನುಸರಿಸಿ, ಸ್ವಾತಂತ್ರ್ಯ ಸಮರದ
ಸಮರ್ಥರು ಮತ್ತು ಜ್ಞಾನಿಗಳು, ತಮ್ಮ ರಾಷ್ಟ್ರವನ್ನು ಅವೈದಿಕ ಅಥವ
ಲೌಕಿಕರಾಷ್ಟ್ರ (Secular State) ಎಂಬ ಪ್ರ[illegible]ವನ್ನು
ಸಂವಿಧಾನದಲ್ಲೇ ಸ್ಥಾಪಿಸಿದರು. ತಮ್ಮ ತಮ್ಮ ಧರ್ಮವನ್ನು ನಿಗ
ರೂ ಯಾವರೀತಿ ತೊಂದರೆಯಾಗದಂತೆ, ತಮ್ಮ ಆನಂದಕ್ಕೆ ತಕ್ಕಂತೆ
ಪಾಲಿಸಬಹುದು. ಜೊತೆಗೆ ನೆರೆಹೊರೆಯವರ ಧರ್ಮವನ್ನು ಮನಸಾರೆ
ಗೌರವಿಸಬೇಕು. ಈ ರೀತಿ ನಡೆವಳಿಕೆ, ತಪ್ಪದಂತೆ ನೋಡಿಕೊಳ್ಳುವುದು
ಆಡಳಿತದ ಆದ್ಯ ಕರ್ತವ್ಯ. ಐದು ನೂರು ವರ್ಷಗಳ ಕೆಳಗೆ ಬಾಬರ್
ಎಂಬ ಮತಾಂಧ ಚಕ್ರವರ್ತಿ, ರಾಮಜನ್ಮಸ್ಥಳದಲ್ಲಿ ಇದ್ದ ಸಂಕೇತವನ್ನು
ಕೆಡವಿ ಮಸೀದಿ ಕಟ್ಟಿದ ಎಂಬ ಊಹೆಯು ತಪ್ಪು ಮಿಥ್ಯೆ ಇದೆ. ಈ
ವಿಜ್ಞಾನ ಯುಗದಲ್ಲಿ ರಾಷ್ಟ್ರ ರಾಷ್ಟ್ರಗಳ ಕೃತಕ ಎಲ್ಲೆಯನ್ನೂ ಮೀರಿ
ಮಾನವಕುಲ ವಿಶ್ವಸಹೋದರತ್ವಕ್ಕೆ ನುಗ್ಗುತ್ತಿರುವ ಈ ಸುವರ್ಣಯುಗ
ದಲ್ಲಿ ಅಜ್ಞಾನಿ, ಅಧರ್ಮಿ, ಅನಾಗರಿಕ, ಭಂಡ ಬಾಬರ್‌ನನ್ನು ಮೀರಿ

ಅವನು ಕಟ್ಟಿದ ಮಸೀದಿಯನ್ನು ಅರ್ಧ ದಿನದಲ್ಲಿ ನಿರ್ನಾಮಮಾಡಿದೆವು, ಹಿಂದು ಎಂದು ಹೇಳಿಕೊಳ್ಳುವ ನಾವು. ಈ ದುಷ್ಕಾರ್ಯಕ್ಕೆ ಒತ್ತಾಸೆ ಕೊಟ್ಟ, [illegible], ಪಕ್ಷಪಾತದ ಬಿ ಜೆ ಪಿ, ಸರ್ಕಾರ, ಸಾಂಪ್ರದಾಯಿಕ ಹಿಂದೂ ಸನ್ಯಾಸಿಗಳು ಸಿದ್ಧಾಂತಗೊಳಿಸಿದೆ. ಪರಕೀಯರ ಧಾಳಿ ಎದುರಿಸಲು ಸರ್ವಶಕ್ತಿಯುಳ್ಳ ಕೇಂದ್ರ ಸರ್ಕಾರ, ಒಂದು ಪಂಗಡದ ಧರ್ಮ ಸಂಕೇತವನ್ನು ರಕ್ಷಿಸುವಲ್ಲಿ ನಿಶ್ಶಕ್ತವಾದುದು ರಾಷ್ಟ್ರದುರಂತ. ಪ್ರಜಾಪ್ರಭುತ್ವದ ಮತ್ತು ಲೌಕಿಕರಾಷ್ಟ್ರದ, ಸದ್ಭಾವನೆಯು ಹೆಪ್ಪು ಹೊಡೆದಿದೆ.

ಈ ವಿಚಾರವಾಗಿ ತಾರೀಖು 31-12-92 ರಂದು, ಪ್ರಧಾನಿಯವರಿಗೆ ಬರೆದೆ. ಅದಕ್ಕೆ 6-1-93 ರಂದು ಉತ್ತರ ಬಂತು. ಒಂದು ಶತಮಾನದ ಹಿಂದೆ ಸ್ವಾಮಿ ವಿವೇಕಾನಂದರು ತಮ್ಮ ಅಗಾಧ ಆಧ್ಯಾತ್ಮಿಕ ಪಾಂಡಿತ್ಯದಿಂದ, ಪಾಶ್ಚಿಮಾತ್ಯದ ಅಂದಿನ ಆಧುನಿಕ ವಿದ್ವಾಂಸರನ್ನು ವಿಜ್ಞಾನ ಕೇಂದ್ರವಾದ ಚಿಕಾಗೋನಗರದಲ್ಲಿ, ಚಕಿತಗೊಳಿಸಿದರು. ಕನ್ಯಾಕುಮಾರಿಯಲ್ಲಿ ನಡೆದ ಈ ಸಂಬಂಧದ ಉತ್ಸವದಲ್ಲಿ ಪಾಲ್ಗೊಳ್ಳಲು ಹೋದಾಗ ಮತ್ತು ಹಿಂದಿರುಗಿದಾಗ ಬೆಂಗಳೂರು ಮಹಾನಗರಕ್ಕೆ ತಾವು ಬಂದುದು ಆನಂದದಾಯಕ. 6-12-92ರ ಅಯೋಧ್ಯೆಯ, ರಾಷ್ಟ್ರ ದುರಂತದ ಫಲವಾಗಿ ಬೆಂಗಳೂರಿನಲ್ಲೂ ಅನೇಕ ಸಂಸಾರಗಳು ಆಪತ್ತಿಗೀಡಾದವು. ಬಲಿಯಾದವರ, ಒಬ್ಬಿಬ್ಬರ ಬಂಧುಗಳನ್ನು ಸಾಂತ್ವನಗೊಳಿಸಿದರೆ, ಚೆನ್ನಾಗಿರುತ್ತಿತ್ತು. ರಾಷ್ಟ್ರ ಇಂಥ ಇಕ್ಕಟ್ಟಿನಲ್ಲಿರುವಾಗ, ತಾವು ಬೆಂಗಳೂರು ನಾಗರೀಕರನ್ನು ಉದ್ದೇಶಿಸಿ, ಮಾತನಾಡಿದ್ದರೆ ಉಪಯುಕ್ತವಾಗಿರುತ್ತಿತ್ತು. ಪಂಡಿತ ನೆಹರು ಅವರು, ರಾಷ್ಟ್ರ ಸಮಸ್ಯೆಗಳನ್ನು ಎದುರಿಸಲು ಜನಸಮೂಹದ ತರಬೇತಿಗಾಗಿ, ಸಾಧ್ಯವಾದಾಗಲೆಲ್ಲಾ, ಸಾರ್ವಜನಿಕರನ್ನು ಉದ್ದೇಶಿಸಿ ಮಾತನಾಡಲು, ತಪ್ಪುತ್ತಿರಲಿಲ್ಲ. ತಾವು ಅಂಥ ಸಾರ್ವಜನಿಕ ಸಂಪರ್ಕ ಇಟ್ಟುಕೊಳ್ಳುವುದು ಉಪಯುಕ್ತ.

ಇದೇ ವಿಚಾರಕ್ಕಾಗಿ ಪ್ರಧಾನಿ ಅವರಿಗೆ ಪುನಃ ತಾರೀಖು 24-4-93ರಲ್ಲಿ ಈ ರೀತಿ ಬರೆದೆ

ತಾವು ಪದೇ ಪದೇ, ಬಾಬ್ರಿಮಸೀದಿ ಕೆಡಹಿದ್ದು ಅಕ್ಷಮ್ಯ ಅಪರಾಧವೆಂದು
ಹೇಳುತ್ತಿರುವುದು ಸಂತೋಷ ವಿಚಾರ. ಈ ಅನಾಹುತದಿಂದ, ವಿಶ್ವ
ದಾದ್ಯಂತದ ಮುಸ್ಲಿಂ ಸಹೋದರರ ಮನಸ್ಸು ಕೆಟ್ಟಿದೆ. ಇಂಥ ಅಕೃತ್ಯ,
ಬುದ್ಧ, ಗಾಂಧಿ ಮುಂತಾದ ಸಾವಿರಾರು ಸಂತರ ಜನ್ಮ ಸ್ಥಳದಲ್ಲಿ
ನಡೆಯಬಾರದಾಗಿತ್ತು. ಎಂದು ಕರ್ನಾಟಕದ ಬುದ್ಧಿಜೀವಿಗಳು ವ್ಯಥೆ ಪಡು
ತ್ತಾರೆ. 5-12-92 ನೇ ದಿನ ಬಾಬ್ರಿ ಮಸೀದಿ ನಿರ್ಮಾಣವೇ
ಸರಿಯಾದ ಪ್ರಾಯಶ್ಚಿತ್ತ, ಶರಣಾಗುವ [illegible] ಗಳಿಸಿಕೊಟ್ಟರೆ,
ನ್ಯಾಯಾಲಯಗಳು [illegible] [illegible] ಮಾಡದೆ,
ಮಸೀದಿ ಕಟ್ಟಲು, ಗುದ್ದಲಿಪೂಜೆ ತಾವೇ ಮಾಡಿ

ಈ ವಿಚಾರವಾಗಿ ನಮ್ಮ ರಾಷ್ಟ್ರಪತಿ ಶ್ರೀಮಾನ್ ಶಂಕರದಯಾಳಶರ್ಮ
ರವರಿಗೆ ತಾರೀಖು 20-4 93 ರಂದು ಈ ರೀತಿ ಬರೆದೆ :-

ಮಹಾಸ್ವಾಮಿ ; ಶ್ರೀ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಎಂಬ ಜನಕ
ಸಂಘ ಮೈಸೂರು ರಾಜ ಇದ್ದರು. ಜನ ಸೇವೆಗಾಗಿ ತಮ್ಮ ರಾಜ್ಯದ
ಕಾಡು ಕೊಂಪೆಗಳಿಗೆ ಇಂಥ ದಿನ ಮೊಕ್ಕಾಂ ಮಾಡುತ್ತೇವೆಂದು ಸೂತ್ರ
ಪತ್ರವನ್ನು ಒಂದು ವರ್ಷ ಮುಂಚಿತವಾಗಿ, ಕಳುಹಿಸುತ್ತಿದ್ದರು
ಇದರಿಂದ, ಆ ಪ್ರಾಂತ್ಯಗಳ, ರಸ್ತೆ, ನೀರು, ಶಾಲೆ, ಆಸ್ಪತ್ರೆ ಮುಂತಾದ,
ಜನೋಪಕಾರಿ ಕಾರ್ಯಗಳು ಸಂಪೂರ್ಣವಾಗುತ್ತಿದ್ದವು. ಜೊತೆಗೆ ಖುದ್ದು
ಜನ ಸಂಪರ್ಕ ಹೊಂದುತ್ತಿದ್ದರು. ಮಹಾಸ್ವಾಮಿ-ತಾವು ಅವರಂತೆ,
ಮರಕುದ ಮೊಕ್ಕಾಂಗಳನ್ನೂ ಜಾರಿಗೆ ತನ್ನಿ ಇಂದಿನ ನಮ್ಮ ಸಾವಿರಾರು
ಮಂತ್ರಿವರ್ಯರೊಬ್ಬರಿಗೂ, ಇಂಥ ಯೋಗಕ್ಕೆ ಪುರುಸೊತ್ತಿಲ್ಲ. ಅತಿವಿಸ್ತಾರ
ಪ್ರಾಂತ್ಯಗಳ ಒಡೆಯರಾದ, ಗೌರ್ನರ್‌ಗಳು ಇಂಥ ಪೂಜೆ ಕೈಕೊಳ್ಳು
ವಂತೆ ಮಾಡಿ.

ಸ್ವಾಮಿವಿವೇಕಾನಂದರು, ಗಾಂಧೀಜಿ ಅವರು ಮತ್ತು ಸಾವಿರಾರು
ಸಂತರು ಶತಮಾನಗಳಿಂದ ಒತ್ತಿ ಹೇಳಿರುವುದು ನರಸೇವೆಯೇ ನಾರಾ
ಯಣನ ಸೇವೆ. ದರಿದ್ರನಾರಾಯಣನನ್ನು ಆದರಿಸಿ ಎಂಬ ಈ ಬುದ್ಧಿ

ವಾದದಲ್ಲಿ ಪೂರ್ಣ ವಿಶ್ವಾಸವಿಟ್ಟು, ಹೊಟ್ಟೆಬಟ್ಟೆಗಿಲ್ಲದವನನ್ನು; ಅಸಕ್ತ ರಕ್ತನನ್ನೂ ಬುದ್ಧಿಹೀನನನ್ನು. "ನ್ಯಾಯ ಅಪಮಾನಕ್ಕೊಳಗಾದವನನ್ನೂ ಅನಾಥನನ್ನು. ಅದುಮಲ್ಪಟ್ಟವರನ್ನು ಅಸ್ಪೃಶ್ಯನನ್ನು-ದೇವರೆಂದು ಮನಃಪೂರ್ವಕವಾಗಿ ಸೇವಿಸುತ್ತಿದ್ದರು. ಮಾನವ ಮುಕ್ತಿ ಕಲ್ಯಾಣ, ನಿರ್ವಾಣಕ್ಕಾಗಿ ಉದ್ಭವಿಸಿರುವ ಸಂಪ್ರದಾಯಗಳಾದ ಸಾಧು ಸನ್ಯಾಸಿ, ಮಠಾಧಿಪತಿಗಳಿಗೆ, ವಿವೇಕಾನಂದ ತತ್ವಗಳು ಜ್ಞಾಪಕದಲ್ಲಿ ಇದ್ದಿದ್ದರೆ, 6-12-92ರ ಅಯೋಧ್ಯೆ ರಾಷ್ಟ್ರದುರಂತ ನಡೆಯುತ್ತಿರಲಿಲ್ಲ. ತುರ್ತುಪರಿಸ್ಥಿತಿಯ ಜಾರಿ, ರಾಮಜನ್ಮಭೂಮಿಗೆ ತಿ ಅಸ್ತಿಭಾರ ಸಂಪ್ರದಾಯದಲ್ಲಿ ರಾಷ್ಟ್ರದ ಪ್ರಧಾನಿ ಪಾಲ್ಗೊಂಡ ದುರಂತ, ಷಾಬಾನೋ ಎಂಬ ಮುಸ್ಲಿಂ ಮಹಿಳೆಯರಿಗೆ ಅತ್ಯುಚ್ಚನ್ಯಾಯಾಲಯ ಜೀವನಾಂಶ ಕೊಟ್ಟಿದ್ದನ್ನೂ, ರಾಜೀವರ ಸರ್ಕಾರ ಅನೂರ್ಜಿತಗೊಳಿಸಿದ್ದು- ಇವೆಲ್ಲ ಲೌಕಿಕ ರಾಷ್ಟ್ರದ ನಂಬಿಕೆಗಳಿಗೆ ಕೊಟ್ಟ [illegible] ಕೊಡಲಿಏಟು.

ಕತ್ತಲೆಯನ್ನು ಕಟುವಾಗಿ ನಿಂದಿಸುವುದಕ್ಕೆ ಬದಲಾಗಿ, ಒಬ್ಬೊಬ್ಬರು ಒಂದೊಂದು ಹಣತೆಹಚ್ಚಿ ಕತ್ತಲೆಯನ್ನು ತಳ್ಳಿಹಾಕಬಹುದು ಶ್ರೇಷ್ಠ ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೇ ನಿಯಂತ್ರಕಶಕ್ತಿ- ಆ ಪ್ರಬಲ ಚೈತನ್ಯ ಅದ್ಭುತ ಸಾಮರ್ಥ್ಯ, ಅಗಾಧಶಕ್ತಿ- ಮಂದವಾಗಿದೆ, ಜಡವಾಗಿದೆ, ಮಂಕುಹಿಡಿದು ಮಲಗಿದೆ ಆ ಕಾರಣದಿಂದಾಗಿ ಸ್ವಾರ್ಥಶಕ್ತಿಗಳಿಗಾಗಿದೆ. ಅವ್ಯವಸ್ಥಿತವಾಗಿದೆ ಬಹುಭಾಷಿತ, ಬಹು ಧಾರ್ಮಿಕ, ಸಂಸ್ಕೃತಿ ಬಹು ಜನಾಂಗೀಯ ರಾಷ್ಟ್ರವಾದ ಭಾರತದ ರಾಷ್ಟ್ರೀಯತೆಯನ್ನು, ಭಾರತೀಯರು ಬಹು ಎಚ್ಚರಿಕೆಯಿಂದ ಕಾಪಾಡಬೇಕಾಗಿದೆ. ಒಬ್ಬ ವ್ಯಕ್ತಿಗೆ, ಒಂದು ಗುಂಪಿಗೆ, ಅನ್ಯಾಯ, ಅವಮಾನಗಳಾದಾಗ ಜಾತಿ, ಕುಲ, ಮತ, ಪಕ್ಷಬೇಧಗಳಿಲ್ಲದೆ ಸರ್ವರೂ ಪ್ರತಿಭಟಿಸಬೇಕು. ಅನ್ಯಾಯ ಅಥವ ಗೆದ್ದೆತ್ತಿನಬಾಲ ಹಿಡಿಯುವುದು ನಿಲ್ಲಬೇಕು ನ್ಯಾಯ ಸಿಕ್ಕುವವರೆವಿಗೂ ಹೋರಾಡಬೇಕು ಅನ್ಯಾಯ ಅವಮಾನ ಎಲ್ಲಿ ಆದರೂ, ಯಾರಿಗೆ ಆದರೂ ಕಣ್ಮುಚ್ಚಿಕೊಂಡಿರುವುದು, ಮಹಾಪಾಪ- ದೊಡ್ಡಪಾಪ— ಮೂರ್ಖತನ. ರಾಜಕಾರಣಗಳಲ್ಲಿ ನ್ಯಾಯಕ್ಕೆ ಬೆಲೆವಿರುವವರು ವಿರಳ.

ಅವರನ್ನು ಹಿಂಬಾಲಿಸುವುದು ಅಪರಾಧ, ಅಹಿಂಸಾ ಮಾರ್ಗದಲ್ಲಿ ನ್ಯಾಯಕ್ಕೆ ಗೌರವವನ್ನು, ಅನ್ಯಾಯಕ್ಕೆ ಪ್ರತಿಭಟನೆಯನ್ನು ಪ್ರದರ್ಶಿಸಬೇಕು.

ಭ್ರಷ್ಟತೆ ಅರ್ಬುದ ರೋಗ- ಅದಿರುವ ಕಡೆ ಅಭ್ಯುದಯ ಅಸಾಧ್ಯ ಬೇಲಿ ಎದ್ದು ಹೊಲ ಮೇಯ್ದಾಗ ಮನುಜನ ಅಂತ್ಯದ ಸಂಭವಿಸಿದಂತೆ, ಸರ್ಕಾರದ ಪ್ರತಿ ಅಂಗವೂ ರೋಗಗ್ರಸ್ತವಾಗುತ್ತಿವೆ ನ್ಯಾಯಾಂಗ, ಅಪರಾಧ ತನಿಖೆ ಸಂಸ್ಥೆ, ರಾಷ್ಟ್ರಾಧ್ಯಕ್ಷರು, ಗೌರ್ನರ್‌ಗಳು, ಚುನಾವಣಾ ನಿಯೋಜಿತ ಮಂಡಳಿ, ಆಡಿಟರ್ ಜನರಲ್, ಸೇನೆಯ ಜನರಲ್‌ಗಳು, ಮುಂತಾದ ಸಂವಿಧಾನ ಏರ್ಪಡಿಸಿರುವ ಪ್ರತಿಕ್ರಿಯಾ ಮತ್ತು ಸಮೀಕ್ಷಣಾ ಅಂಗಗಳು ನಿಷ್ಪಕ್ಷ ಕಾರ್ಯಚಟಿಕೆ ನಡೆಸಲಸಾಧ್ಯ. 250 ಕೋಟಿ ಭ್ರಷ್ಟತೆಗಿಂತ ಹೆಚ್ಚಾಗಿ, ಪ್ರಧಾನಿಗಳ ಮತ್ತು ಅವರನ್ನು ಚುನಾಯಿಸಿದ ಜನಸಮೂಹವು- ಇವರಿಬ್ಬರ ಮಧ್ಯದ ನಂಬಿಕೆಯು ಛಿದ್ರಗೊಂಡಿವೆ, ಕುಸಿದು ಬಿದ್ದಿವೆ. ಈ ಪುಣ್ಯಭೂಮಿಯು ಧರ್ಮಭೂಮಿಯು, ಜನಾಂಗ, ಮುಗ್ಧರು, ಸರಳರೂ, ಅಕ್ಷರಹೀನರು, ನಿಷ್ಕಪಟಿಗಳು, ಅವರಲ್ಲೂ ಕಿರೀಟಧಾರಿಗಳು ಎಂದರೆ ವಿಷ್ಣುಸ್ವರೂಪ ಎಂದು ನಂಬಿರುವ ಜನ, ಪೂರ್ಣನಂಬಿಕೆ, ಭರವಸೆ, ವಿಶ್ವಾಸ, ಅವಲಂಬನೆಗಳ ಪ್ರತೀಕ. ಅಪಹರಣವಾಗಿರುವ ಅಮೂಲ್ಯವಾದ ನಂಬಿಕೆ ಎಂಬ ಆಸ್ತಿಯನ್ನು ಜೀರ್ಣೋದ್ಧಾರ ಮಾಡಲು, ಚೈತನ್ಯ ಉಳ್ಳ ಪ್ರಾಮಾಣಿಕ ಪ್ರಧಾನಿ— ನಾಯಕನಿಗಾಗಿ ರಾಷ್ಟ್ರ ಆತುರದಿಂದ,ಕಾತುರತೆಯಿಂದ ಕಾಯುತ್ತಿದೆ.

ಭೋಫೋರ್ಸ್‌ನಂತಹ ಭೂತದ ದರ್ಬಾರು ಡೆಲ್ಲಿ ಒಂದಕ್ಕೆ ಸೀಮಿತವಾಗಿರದೆ, ಪ್ರತಿಪ್ರಾಂತ್ಯದ ರಾಜಧಾನಿಯೊಳಗೂ ತನ್ನ ಕಾರುಬಾರನ್ನು ಪ್ರತಿ ಘಳಿಗೆಯಲ್ಲೂ ನಡೆಸುತ್ತಿದೆ ರಾಜಕೀಯ ಪ್ರಭಾವವೇ ಇದರ ಮೂಲ. ಇಂಥ ಹೊಲಸು ಹಣದಿಂದಲೇ ಕೇಂದ್ರದಲ್ಲೂ ಮತ್ತು ಪ್ರಾಂತ್ಯಗಳಲ್ಲೂ ಒಬ್ಬ ವ್ಯಕ್ತಿಯು ನಿರಂತರದ ಮುಖಂಡತ್ವ ಮುಂದುವರಿಯುತ್ತಾ ಬಂದಿರುವುದು. ಅನೇಕಾವರ್ತಿ ಗೆದ್ದು ಬಂದಿರುವ ಪ್ರಜಾಪ್ರತಿನಿಧಿಗಳಲ್ಲ

ನೇಕರು, ಒಂದಲ್ಲ, ಅನೇಕ ಭೋಫೋರ್ಸ್‌ನಂಥ, ಸಂಸ್ಥೆಗಳ, ವ್ಯಕ್ತಿಗಳ
ಕೃಪಾಪೋಷಿತರು. ಲಂಚಕ್ಕೆ ಕೈ ಒಡ್ಡದಿರುವ ರಾಜಕಾರಣಿಗಳು ವಿರಳ.
ಪಕ್ಷಗಳು ಕೂಡ ಅಪೂರ್ವ. ಘನತೆ, ಕೀರ್ತಿ, ನ್ಯಾಯ, ನಿಷ್ಠೆ, ನಿಷ್ಕಪ
ಟತೆ, ನಿಸ್ವಾರ್ಥತೆ, ಮತ್ತು ಸಂಪೂರ್ಣ ಪ್ರಾಮಾಣಿಕತೆಯಿಂದ ಸಾರ್ವ
ಜನಿಕ ಜೀವನ ನಡೆಸುವವರು ದುರ್ಲಭವಾಗಿದ್ದಾರೆ ರಾಜಕಾರಣಿಗಳಲ್ಲಿ
ನೇಕರು ಪರೋಪಜೀವಿಗಳು ಅತ್ಮಾಭಿಮಾನಿಗಳು, ಛಲವಾದಿಗಳು,
ಅಹಿಂಸಾ ವಾದಿಗಳು, ನ್ಯಾಯವಾದಿಗಳು, ತ್ಯಾಗಶೀಲರು, ಸೇವಾ
ಮನೋಭಾವದವರು, ಸರಳಜೀವಿಗಳು, ಮರಳುಗಾಡಿನ ನೀರಿನಂತೆ
ಅಪೂರ್ವವಾಗಿದ್ದಾರೆ. ನವಭಾರತದ ಸೌರವ್ಯೂಹಶಕ್ತಿಯು ಯುವ
ಭಾರತದ ಉದಯಕ್ಕಾಗಿ, ದೀನರು, ದಲಿತರು ಕಣ್ಣೀರಿಟ್ಟು ಕಾಯು
ತ್ತಿದ್ದಾರೆ.

ರಾಷ್ಟ್ರದ್ರೋಹದ ದುಷ್ಕರ್ಮ ಶೈಲಿ ದಂಡ ತೀರಿಸದೆ ಬಿಡದು ಎಂದು
ಒತ್ತಿ ಒತ್ತಿ ಹೇಳಬೇಕಾಗಿದೆ ಪರಿಗಿಲ್ಲದ ರುಚಿಯಾದ ತಿನಿಸು ಸಿಕ್ಕಿದೆ
ಯೆಂದು ಹೊಟ್ಟೆ ಬಿರುಸಿಕೊಂಡಾಗ ಅದರ ಫಲ ನರಕಯಾತನೆ,
ಅಂಗಾಂಗವೆಲ್ಲ ಕಜ್ಜಿ, ತುರಿ, ಕುರು, ಮೈ ನೀರು, ಬಾಯಿ, ದುರ್ವಾ
ಸನೆ ಇವುಗಳನ್ನು ಮುಚ್ಚಿಕೊಳ್ಳಲು ಕೃತಕ ಔಷಧಿ ಮತ್ತು ಪರಿಮಳ
ವಸ್ತುಗಳು ಬೇಕು. ಇದರಿಂದ ಉಪಶಮನ ಅಸಾಧ್ಯ, ಉಪವಾಸ
ಸಾತ್ವಿಕ ಆಹಾರ, ಬಿಸಿಲಲ್ಲಿ ಬೆವರಿಸುವ, ಕೆಲಸದಿಂದ, ಕುರು ಪಕ್ವಾ
ಗಲು ಬಿಟ್ಟು, ಕೀವು ರಕ್ತ, ಹೊರತಂದಾಗ ಹಾಯೆನಿಸುವುದು ತಪ್ಪು
ಮಾಡದಿರುವುದು ಲೇಸು. ಮಾಡಿ ಅದನ್ನು ಸುಳ್ಳಿನ ಬಣ್ಣದ ಬಟ್ಟೆ
ಯಿಂದ ಮುಚ್ಚಲೆತ್ನಿಸುವುದು ಮೂರ್ಖತನ. ಪಶ್ಚಾತ್ತಾಪವೇ ಶೂರನ
ದೇಶಾಭಿಮಾನಿಯ ಮಾರ್ಗ. ಧೈರ್ಯಮಾಡಿ, ಮೊದಲು ಏಕಾಂತವಾಗಿ
ತನ್ನ ಮುಂದೆ ತಾನು ತಪ್ಪು ಒಪ್ಪಿಕೊಂಡು, ಇನ್ನಷ್ಟು ಧೈರ್ಯಮಾಡಿ
ಕೊಂಡು ಅನ್ಯಾಯ ಯಾರಿಗೆ ಆಗಿದೆಯೋ ಅವರ ಮುಂದೆ ಲೋಪ
ಗಳನ್ನು ಒಪ್ಪಿಕೊಳ್ಳುವುದು ಆನಂದದಾಯಕ, ಸುಖ ಮತ್ತು
ಶ್ರೇಯಸ್ಕರ.

ಕೇಂದ್ರಸರ್ಕಾರದ ಮುಖಂಡತ್ವ ಬಹುಮುಖ್ಯ. ಕೇಂದ್ರ, ಚಕ್ರವರ್ತಿ ಸ್ಥಾನದಲ್ಲಿದೆ. ಇಂದಿನ ನಮ್ಮ ಸಂವಿಧಾನದ, ಅನುಸಾರ ಕೇಂದ್ರವೇ, ರಾಜಧರ್ಮದ, ಬೆಂಬಲ, ಆಶ್ರಯ, ಆಧಾರ, ನೆಲೆ, ಮತ್ತು ರಕ್ಷಕರು. ಅದೇ ಸರ್ವಸೌಖ್ಯ ಮೂಲ, ಭವ್ಯಬೀಜ, ಚಂದನದ ಚೀಗು, ವಿಣಾಕಿನ ಮೊದುಳು. ಹುಮ್ಮಸ್ಸಿನ ಮತ್ತು ಹಿರಿತನದ ಹೃದಯ. ರಾಜರನ್ನು ಸ್ಥಾನಾಂತರಿಸಿದ ರಾಜಕಾರಣಿಗಳಲ್ಲಿ ಮೂಲಭೂತ ಯೋಗ್ಯತೆ ಮಾಯ ವಾಗಿದೆ. ತನ್ನ ಅಧಕ್ಷತೆಯಿಂದ. ಅನ್ಯಾಯಗಳಿಂದ, ನಾಯಕ ತನ್ನ ಪೀಠವನ್ನು ಸ್ಥಿರಪಡಿಸಿಕೊಳ್ಳುವ ದುರಾಶೆಯಿಂದ, ಕೇಂದ್ರ, ಪ್ರಾಂತೀಯ ವಿಭಾಗಗಳ ಮೇಲೆ, ತನ್ನ ಪ್ರಭಾವ ಬೀರಲು, ಸಂಪೂರ್ಣ ವಾಗಿ ನಿಶ್ಶಕ್ತವಾಗಿದೆ. ಈ ಪವಿತ್ರ ಭೂಮಿ ಸರ್ವಸೌಭಾಗ್ಯಗಳ ಸಂಕೀರ್ಣ. ಪ್ರಕೃತಿ ಸೌಂದರ್ಯ ಒಂದು ವಿಶಿಷ್ಟತೆ. ಫಲವತ್ತಾದ ಭೂಮಿ. ಫಲಭರಿತವಾದ ಮರಗಿಡಗಳು, ಕಣ್ಮನ ಸೆಳೆಯುವ ಮೃಗ ಪಕ್ಷಿಗಳನ್ನೊಳ ಗೊಂಡ ದಟ್ಟ ಅರಣ್ಯ, ಅಲ್ಲದೆ ರಾಷ್ಟ್ರದ ಶಿಖರವಾದ ಹಿಮಾಲಯ ನಮ್ಮ ಹೆಮ್ಮೆ. ಜೊತೆಗೆ ಉತ್ಕರ್ಷವಾದ ಕೈಗಾರಿಕೆಗಳು ತಂಗೊಳಿಸುತ್ತಿವೆ. ಸ್ವಾತಂತ್ರ್ಯನಂತರ ರಾಷ್ಟ್ರ ಆಶ್ಚರ್ಯಕರವಾದ ಪ್ರಗತಿ ಹೊಂದಿದೆ. ಆದರೆ, ಈ ಸಂವೃದ್ಧಿ ಕೇವಲ, ಕೆಲವು ನಿರ್ಧಿಷ್ಟ ಗುಂಪಿಗೆ ಮಾತ್ರ ಮೀಸ ಲಾಗಿದೆ, ಸರ್ವಜನಹಿತಾರಕ್ಷಣೆಯ ಉಚ್ಛಧ್ಯೇಯ ನಮ್ಮ ಕೇಂದ್ರಸರ್ಕಾ ರದ ರಕ್ತದಲ್ಲಿ ಇಲ್ಲವಾಗಿ, ಅರ್ಧ ಶತಮಾನ ಕಳೆದರೂ, ಮೂರ್ಕಾಲು ಪಾಲು ಜನ ಬಡತನದಲ್ಲಿ ತೊಳಲುತ್ತಿದ್ದಾರೆ. ಒಂದುಕಡೆ ಪೂರ್ಣ ನಿರಾ ಶ್ರಯ ಸ್ಥಿತಿ ಮತ್ತೊಂದುಕಡೆ ಹೇಯ ಐಶ್ವರ್ಯದ ಕ್ರೋಢೀಕರಣ, ಅಜ್ಞಾನಿಗಳ, ಅನಕ್ಷರಸ್ಥರ, ಅಧಿಕ ವೈಮನಸ್ಯದ ದುರ್ಲಾಭ ಪಡೆದು ಕೇವಲ ಕೆಲವು ಜನ ಕೋಟ್ಯಾಧಿಪತಿಗಳಾಗುತ್ತಿದ್ದಾರೆ ಅವರ ಕಷ್ಟ ಕಾರ್ಪಣ್ಯಗಳ ಕಡೆ, ಮೊಸಳೆ ಕಣ್ಣೀರು ಹರಿಸಿ ಭಾಷಣ ಮಾಡುವುದು ತಪ್ಪುತ್ತಿಲ್ಲ. ಸಮಾನ ಹಂಚಿಕೆಯ ಪ್ರಕೃತಿ ನಿಯಮವನ್ನು ಉಲಂಘಿ ಸುವವನು, ಕಳ್ಳ, ನೀಚ, ಮತ್ತು ಸಮಾಜದ್ರೋಹಿ, ಸಂಸಾರ, ಸಂಘ, ಸಂಸ್ಥೆ, ಪ್ರಾಂತ್ಯ, ರಾಷ್ಟ್ರ, ಒಂದಕ್ಕೊಂದರ ಸಮಸ್ಯೆಗಳ ಉದ್ಭವ, ಉಲ್ಬಣಗಳಿಗೆ ಈ ಉಲ್ಲಂಘನೆಯೇ ಮೂಲ.

ಜೀವನದ ಪ್ರತಿಯೊಂದು ರಂಗದ ನೈತಿಕ ಮೌಲ್ಯ ಮಲಿನವಾಗಿ, ಎಲ್ಲಾ
ವೈಯುಕ್ತಿಕ ಮತ್ತು ಸಾರ್ವಜನಿಕ ಕ್ಷೇತ್ರ ಕೊಳೆತು ನಾರುತ್ತಿದೆ.
15-3-91 ರಂದು ರಾಷ್ಟ್ರಪಿತನ ಸಮಾಧಿ ಅಪವಿತ್ರತೆಯು ಅತ್ಯಾಚಾರ,
ವಿಶ್ವದಾದ್ಯಂತ ಸುಸಂಸ್ಕೃತರನ್ನು ತಲ್ಲಣಗೊಳಿಸಿತು. ಇಡೀ ಪ್ರಪಂಚವೇ,
ಪೃಥ್ವಿಯ ಮೇಲೆ, ಓಡಾಡಿದನೆಂದು ನಂಬಲಾರದಷ್ಟು ಪರಿಪೂರ್ಣನಾದ
ಮಹಾನುಭಾವನಿಗೆ ಆದ ಅವಮಾನಕ್ಕೆ ತೋರಬೇಕಾದ ಉಗ್ರ ಪ್ರತಿ
ಭಟನೆ ಇಲ್ಲದಿರುವುದು, ನಮ್ಮ ನೈತಿಕ ಅಧೋಗತಿಯ ಚಿಹ್ನೆ ಸರ್ವ
ವ್ಯಾಪಕವಾಗಿರುವ ಭ್ರಷ್ಟತೆ, ಅರ್ಬುದ ರೋಗದಂತೆ ಧ್ವಂಸಕಾರಿಯಾಗಿದೆ
ಕಲಬೆರಿಕೆ ಕಸುಬಿನ ಕುತಂತ್ರ, ಅರಿಯದ ಅಸುಳೆಗಳ ಆಹಾರವಸ್ತು
ಗಳನ್ನೂ, ಜೀವ ಉಳಿಸುವ ಔಷಧಿಗಳನ್ನು ಬಿಟ್ಟಿಲ್ಲ. ನಾಡಿನ ನಿಬಂಧನೆ
ಸಮಾಜದ ಮತ್ತು ಸಂಸಾರದ, ಕಟ್ಟಳೆಗಳು ಕಳಚಿಕೊಂಡು, ಸರ್ವವೂ
ನಶಿಸುತ್ತಿವೆ. ನಡುಹಗಲಲ್ಲೇ, ನಡುಬೀದಿಯಲ್ಲೇ, ಹೆಂಗಸರ ತಾಳಿಸರ
ಕೀಳುವಿಕೆ, ಮಾನಮರ್ಯಾದೆ ಭಂಗ, ಮಕ್ಕಳ ಅಪಹರಣ, ವರದಕ್ಷಿಣೆಯ
ಸಾವು, ಪ್ರತಿನಿತ್ಯದ ಘಟನೆಗಳಾಗಿವೆ ನಿರ್ಭಯದ ಕಾನೂನು ಮುರಿತ
ದಿಂದ, ನಿರಂತರದ ಶಾಂತಿ ಭಂಗ, ಅನಿಶ್ಚಿತದ ಬದುಕು, ಗುಮಾನಿ
ಇಲ್ಲದೆ ಗುಂಡಿನೇಟು ಮತ್ತು ಬಾಂಬಿನ ಎಸೆತಗಳಿಂದ, ನೂರಾರು ಜನ
ಒಂದೇಘಳಿಗೆಯಲ್ಲಿ ರಕ್ತದ ಕೋಡಿಯಲ್ಲಿ ಶವಗಳಾಗುತ್ತಿದ್ದಾರೆ ಗೃಹಕ್ಕಿರ
ಬೇಕಾದ ಗೌರವಾರ್ಹತೆ, ಆರಾಮ, ಸುರಕ್ಷತೆ, ನಿರಾಳತೆ ನಿಶ್ಚಿಂತತೆ,
ನಿಗೂಢತೆ ಮತ್ತು ನೆಮ್ಮದಿ ನಿರ್ಮೂಲವಾಗಿವೆ ಭೂಮಿ, ಆಕಾಶ,
ನೀರು, ಮನೆ, ಮಠ, ಊರು, ಕಾಡು, ಎಲ್ಲಿದ್ದರೂ ಗಂಡಾಂತರ ತಪ್ಪಿ
ದ್ದಲ್ಲ. ಯಾರೂ ಎಲ್ಲೂ ನಿರ್ಭಯದಿಂದ ಭರವಸೆಯಿಂದ ಸುಸೂತ್ರವಾಗಿ
ಇರುವಂತಿಲ್ಲ.

ಒಬ್ಬ ಸಾಮಾನ್ಯ ದಂತ ಚೋರ, ವೀರಪ್ಪನ್, ನಾಲ್ಕಾರು ವರ್ಷಗಳಿಂದ
ಸಾವಿರಾರು ಆನೆಗಳನ್ನಲ್ಲದೆ, ನೂರಾರು ಅಧಿಕಾರಿಗಳನ್ನು ಬಲಿ ತೆಗೆದು
ಕೊಂಡು, ಕರ್ನಾಟಕ ಮತ್ತು ತಮಿಳುನಾಡು ಸರ್ಕಾರಗಳಿಗೆ ಅಲ್ಲದೆ
ಇಡೀ ರಾಷ್ಟ್ರಕ್ಕೆ ಸವಾಲ್ ಒಡ್ಡಿದ್ದಾನೆ. ಓರ್ವ ಸಮಾಜಘಾತುಕ, ದಂತ

ಮತ್ತು ಚಂದನದ ವಿತ್ತದಿಂದ, ಪೋಲೀಸರ, ಅರಣ್ಯ ಇಲಾಖೆಗಳ, ಅಲ್ಲದೆ ಸರ್ಕಾರದ ರಹಸ್ಯಗಳನ್ನು ಕೊಂಡುಕೊಳ್ಳುವ ಶಕ್ತ, ಚದುರ, ಚಂಡ, ಚಾಕಚಕ್ಯ, ಚೋರ ತನ್ನದೆ ಒಂದು ಚಕ್ರಾಧಿಪತ್ಯವನ್ನೂ ಸ್ಥಾಪಿಸಿ ಚರಿತ್ರೆಯನ್ನು ನಿರ್ಮಿಸಿದ್ದಾನೆ. ಅದಕ್ಕೆ ಕಾರಣ ಎಲ್ಲೆ ಇಲ್ಲದೆ ಹಬ್ಬಿರುವ ಭ್ರಷ್ಟತೆ, ಅವರ ಪರಿಣಾಮವಾದ ಅದಕ್ಷತೆ ಮತ್ತು ವಿಶ್ವಾಸ ಘಾತುಕತನ, ಬಂಧು ಬಾಂಧವರನ್ನು ಕಳೆದುಕೊಂಡ ವಿಧವೆ ಮತ್ತು ಅನಾಥರಿಗೆ, ಬಡಬೋರೆಗೌಡನ ಹಣದಿಂದ ಸರ್ಕಾರದ ಧಾರಾಳವಾದ ಕೊಡುಗೆ, ಶಾಂತಿ, ಸಮಾಧಾನ, ರಕ್ಷಣೆ, ತರಬಲ್ಲದೆ ? ಹುಮ್ಮಸ್ಸಿನ ಸಮರ್ಪಣಾ ಮನೋಭಾವದ ಹಲವಾರು ಯುವ ಅಧಿಕಾರಿಗಳು ಬಲಿ ಯಾದರು. ಅಖಂಡ ಅಧಿಕಾರವರ್ಗದ ನೈತಿಕ ಸ್ಥೈರ್ಯದ ಅಧೋಗತಿ ಯಾಯಿತು. ಸೈನ್ಯದ ಸಹಾಯ ಕೋರಲು, ಈ ವಿಳಂಬನದ ಪ್ರಯೋಗ ಅವಶ್ಯಕತೆ ಇತ್ತೆ ? ಕೇಂದ್ರಸಹಾಯ ಮೊದಲೇ ಕೇಳಲು ಮುಖ್ಯಮಂತ್ರಿಗಳ ಸ್ವಪ್ರತಿಷ್ಠೆ, ಅಡ್ಡಿ ಬಂತೆ ?

ರಾಷ್ಟ್ರದ ಪ್ರಥಮ ಮಹಿಳಾ ಪ್ರಧಾನಿ ಇಂಧಿರಾಗಾಂಧಿಯವರನ್ನು ಅವರ ರಕ್ಷಕರೇ ಗುಂಡಿನಿಂದ ಹೊಡೆದು ಸಾಯಿಸಿದರು. ನಮ್ಮ ಮಾಜಿ, ಯುವ ಪ್ರಧಾನಿ ರಾಜೀವಗಾಂಧಿಯವರು, ಭಯೋತ್ಪಾದಕರ ಮಾನವ ಬಾಂಬಿಗೆ ಬಲಿಯಾದರು. ಇತ್ತೀಚೆಗೆ ಮುಂಬೈ ಮತ್ತು ಕಲ್ಕತ್ತೆಗಳಲ್ಲಿ, ದುಷ್ಕರ್ಮಿಗಳು ಸರಣಿ ಬಾಂಬ್ ಸ್ಫೋಟಿಸಿ, ಮುನ್ನೂರಕ್ಕೂ ಹೆಚ್ಚು ಜನರನ್ನು ಬಲಿ ತೆಗೆದುಕೊಂಡರು. ಪರದೇಶಗಳಿಂದ ಬಂದ ಈ ಬಾಂಬು ಗಳು ಸುಂಕದ ಅಧಿಕಾರಿಗಳ ಶಾಮೀಲಿನಿಂದ ಬೊಂಬಾಯಿ ಸೇರಿತು ಎಂಬ ಸುದ್ದಿ, ಧಿಗ್ಭ್ರಮೆಗೊಳಿಸುತ್ತದೆ ಇಬ್ಬರು ಪ್ರಧಾನಿಗಳ ಕೊಲೆ ಯಲ್ಲೂ, ಪ್ರಭಾವಶಾಲಿಗಳ ಸಹಾಯವಿದ್ದಿರಬಹುದು ಎಂಬ ಸಂಶಯ ಕೊರೆಯುತ್ತಿದೆ. ಅಧಕ್ಷತೆಯೇನೊ ಎದ್ದು ಕಾಣುತ್ತಿದೆ. ಪಂಜಾಬು ಜಮ್ಮು ಕಾಶ್ಮೀರ್ ಮುಂತಾದ ಪ್ರಾಂತ್ಯಗಳಲ್ಲಿ ನಿತ್ಯ ನಡೆಯುತ್ತಿರುವ ನರ ಮೇಧಕ್ಕೆ ಕೊನೆಯಿಲ್ಲ. ಜನಸಾಮಾನ್ಯರು, ವಿಮಾನ, ಹಡಗು. ರೈಲು, ಬಸ್ಸುಗಳ ಪ್ರಯಾಣಿಕರು ಬದುಕಿ ಮನೆಗೆ ಬರುವ ಭರವಸೆ ಇಲ್ಲ

ಒರಿಸ್ಸಾದ ಮುಖ್ಯಮಂತ್ರಿ ಮತ್ತು ಮುಖ್ಯಕಾರ್ಯದರ್ಶಿ ಅವರನ್ನು ಅವರ ಕಛೇರಿಯಲ್ಲಿ, ಪೋಲೀಸರ ಎದುರಿನಲ್ಲಿ ನಿರ್ಭಯದಿಂದ, ದಯಾ ದಾಕ್ಷಿಣ್ಯವಿಲ್ಲದೆ, ನೌಕರರು ಹೊಡೆದು ಗಾಯಮಾಡಿ, ಬೈದು ಅವಮಾನ ಮಾಡಿದ್ದಾರೆ.

ಸಾಮಾನ್ಯರಿಗೆ ಮಾರ್ಗದರ್ಶನ ನೀಡಬೇಕಾದ, ಪ್ರಜಾಪ್ರತಿನಿಧಿಗಳ ನಡವಳಿಕೆ ಶೋಚನೀಯವಾಗಿದೆ. ವಿಪರೀತ ಹಠ, ಉದ್ರೇಕದ ಭಾವಭಂಗಿ ಕಿರುಚಾಟ, ಬೈಗುಳ, ಹೊಡೆದಾಟ, ಮೇಜು ಕುಟ್ಟುವಿಕೆ, ಕಾಗದ ಪುಸ್ತಕಗಳ ಎಸೆದಾಟ, ಧರಣಿ, ದಪ್ಪ ಮತ್ತು ದೀರ್ಘ ವ್ಯಂಗ್ಯಧ್ವನಿ, ಅಧ್ಯಕ್ಷರುಗಳ ಅಧಕ್ಷತೆ ಮತ್ತು ಅಸಹಾಯಕತೆಯ ಅಳು, ಇವು ರಾಜಕೀಯ ತೀರ್ಪಿನ ಪೀಠಗಳ ಠೀವಿ.

ನಮ್ಮ ಸಂಸತ್ತು ಮತ್ತು ವಿಧಾನಸಭಾಸದಸ್ಯರು ಎಲ್ಲಾ ವಿಷಯಗಳಲ್ಲಿ ಭಿನ್ನತೆ ತೋರಿದರೂ, ಪ್ರತಿವರ್ಷ ತಮ್ಮ ವೇತನ, ಮತ್ತು ಭತ್ಯೆಗಳ ಹೆಚ್ಚಳದ ಪ್ರಶ್ನೆಗೆ, ಸದ್ದುಗದ್ದಲವಿಲ್ಲದ ಏಕತೆ, ಪ್ರತಿ ಪ್ರಜೆಯ ಗಮನಕ್ಕೆ ಬರದೆ ವಿಧಿ ಇಲ್ಲ. ದೇಶದ ಆಧಾಯದ ಬಹುಭಾಗ, ನೌಕರರ ಪ್ರತಿವರ್ಷ ಏರುತ್ತಿರುವ ಸಂಬಳ ಸಾರಿಗೆಗೆ ಸೋರಿ, ರಾಷ್ಟ್ರ ಪರ ರಾಷ್ಟ್ರಗಳ ಸಾಲಗಾರರಾಗುವುದು ತಪ್ಪುವಂತಿಲ್ಲ. ತಮ್ಮ ಸುಖ ಭೋಗಗಳಲ್ಲಿ ಮಗ್ನರಾಗಿರುವ, ಪ್ರಜಾಪ್ರತಿನಿಧಿಗಳು, ಬಾಕಿ ನೌಕರರನ್ನು ರಾಷ್ಟ್ರ ಪ್ರೇಮಕ್ಕಾಗಿ, ಬಡಜನ ಹಿತಕ್ಕಾಗಿ, ತಮ್ಮ ಸೋದರರ ಸುಖಕ್ಕಾಗಿ, ಬೇಡಿಕೆಗಳನ್ನು ಕಮ್ಮಿ ಮಾಡಿಕೊಳ್ಳಿ, ಎಂದು ಹೇಳುವ ನೈತಿಕ ಹಕ್ಕು ಕಳೆದುಕೊಂಡಿದ್ದಾರೆ. ತನ್ನ ಸ್ಥಾನಮಾನಗಳನ್ನು ರಕ್ಷಿಸುವ ಮುಖ್ಯಸ್ಥ ಎಷ್ಟೇ ಭ್ರಷ್ಟನಾದರೂ ಅವನಿಗೇನೆ ನಿಷ್ಠೆ ನಿಶ್ಚಿತ. ಅಂಥ ಅನುಗ್ರಹದಾರನ ಆಜ್ಞಾವರ್ತಿ, ಕೊಳ್ಳೆಯಲ್ಲಿ ಹಿಸ್ಸೆಕೊಡುವವನಿಗೆ ಸಂಪೂರ್ಣ ಕೃತಜ್ಞತೆ ಮತ ಕೊಟ್ಟು ಪೀಠಕ್ಕೇರಿಸಿದ ಪ್ರಭುವಿಗೆ ಪೊಳ್ಳು ಪ್ರೋತ್ಸಾಹ, ತಟವಟ ತೆಗಳಿಕೆ, ಕಿಲಾಡಿತನ ಮತ್ತು ಕಾದಿಟ್ಟ ಕೃತಘ್ನತೆ. ಪ್ರಜಾಪ್ರಭುತ್ವದ ಉಳಿವಿಗೆ ಪ್ರತಿನಿಧಿಗಳ, ನಿಸ್ವಾರ್ಥತೆ, ಆತ್ಮಸಂಯಮ ಅತ್ಯಾವಶ್ಯಕ. ಪ್ರಾಮಾಣಿಕ ಪ್ರತಿನಿಧಿ ನಿಷ್ಠಪ್ರಜೆಗಳ ಜೋಡಿಯೇ ಆದರ್ಶಪ್ರಜಾಪ್ರಭುತ್ವ. ಕಿವುಡ ಆಡಳಿತ, ಮೂಕ ಪ್ರಜೆಗಳು ಪ್ರಜಾಪ್ರಭುತ್ವದ

ಮಾರಕ. ಪ್ರಜಾಪ್ರಭುತ್ವ ಒಂದು ವಿಡಂಬನೆಯಾಗಿದೆ. ರಾಜಕೀಯದಲ್ಲಿ ಪ್ರಾಮಾಣಿಕರ, ನಿಜ ದೇಶಪ್ರೇಮಿಗಳ ಪ್ರವೇಶ ನಿಷಿದ್ಧ ಕಾರಣ ಅಲ್ಲಿರುವ ಒಳಸಂಚು, ಭ್ರಷ್ಟತೆ, ದುರಾಶೆ, ಮುಖಸ್ತುತಿ, ಮುಂತಾದ ನೀಚ ವೃತ್ತಿಗಳು. ಅವರ ಉತ್ಸಾಹವನ್ನು ಕುಂದಿಸಿ ದೂರ ಸರಿಯುವಂತಹ ಪರಿಸ್ಥಿತಿ ನಿರ್ಮಿಸಲ್ಪಟ್ಟಿದೆ. ಅಧಿಕಾರದಲ್ಲಿರುವವರನ್ನು ಅಟ್ಟೈಸುವ ಪ್ರವೃತ್ತಿ ಅಸಹ್ಯವಾಗುತ್ತಿದೆ. ಆತ್ಮಗೌರವ ಹರಾಜು ಹಾಕಿ ಪಡಿಯುವುದೇನು ? ತನ್ನ ತೋಟಕ್ಕೆ ಡಾಂಬರು ರಸ್ತೆ, ನೀರು ತುಂಬದಿದ್ದರೂ ಲಕ್ಷಾಂತರ ರೂಪಾಯಿನ, ತನ್ನ ಜಮಾನಿಗಾಗಿ ಕೆರೆ, ತನ್ನ ಬಂಧು-ಬಾಂಧವರಿಗೆ ಸರ್ಕಾರಿ ಉದ್ಯೋಗ, ಗುತ್ತಿಗೆ, ಕಾಲೇಜುಗಳ ಸ್ಥಳ, ಅಲ್ಲದೆ ತನ್ನ ಜೇಬು ತುಂಬಿಸಿದ ಭ್ರಷ್ಟ ಅಧಿಕಾರಿಗಳಿಗೆ ಲೂಟಿ ಸಿಕ್ಕುವಕಡೆ ವರ್ಗ, ಇಂಥ ತುಚ್ಛ ಸ್ವಾರ್ಥಶೆಯಲ್ಲಿ ಮಗ್ನರಾಗಿ ಉಚ್ಛ ಜವಾಬ್ದಾರಿಯನ್ನು ನಿರ್ವಹಿಸುವ ಘನೋದ್ದೇಶ, ಅವರಿಗೆ ಹೊಳೆಯುವುದೇ ಇಲ್ಲ.

ಪೋಕರಿಗಳು, ಭಯೋತ್ಪಾದಕರು, ಉಗ್ರಗಾಮಿಗಳು ಕುಪ್ರಸಿದ್ಧ ಅಪರಾಧಿಗಳು, ಚೋರ ತಂಡಗಳು, ರಾಜಕಾರಣಿಗಳ ಅಸ್ತ್ರರು. ಬಿಹಾರಿನ ಮಂತ್ರಿ ಸಂದನಮಂಡನೆಂಬ ಡಕಾಯಿತನ ಆಶ್ರಯದಾತನಾಗಿದ್ದುದು ಚರಿತ್ರೆಯ ಅಂಶವಾಗಿದೆ ಸೂರಬ್‌ಸಿಂಗ್ ಎಂಬ, ವಿಧಾನಸಭಾ ಸದಸ್ಯ ಸುಮಾರು ಹದಿನೈದು ಜನ ರಾಜಕಾರಣಿಗಳ ಕೊಲೆಗೆ ಕಾರಣನೆಂಬ ಅಂಶ ರುಜುವಾತಾಗಿದೆ. ರಾಂದೇವ್‌ಸಿಂಗ್ ವಿಧಾನಸಭಾ ಸದಸ್ಯನ ಶವವನ್ನು ಸಭೆಯಲ್ಲಿ ಪ್ರದರ್ಶಿಸಲ್ಪಟ್ಟಿತು. ಚೋರ ತಂಡದವರಿಗೂ ರಾಜಕಾರಣಿಗಳಿಗೂ ನಿಕಟಸಂಬಂಧ ಇದೆ ಎಂದು ನಂಬಲು ಸಾಕ್ಷಾಧಾರಗಳಿವೆ ಎಂದು ಉತ್ತರಪ್ರದೇಶದ ಗೃಹಮಂತ್ರಿ ಹೇಳಿಕೆ ಕೊಟ್ಟರು. ಮಧ್ಯಪ್ರದೇಶದ ಗೃಹಮಂತ್ರಿ ನರಸಿಂಗರಾವ್ ದೀಕ್ಷಿತರು ಗೂಂಡಾಗಳನ್ನು ತಮ್ಮ ಗೃಹದಲ್ಲೇ ಸಾಕುತ್ತಿದ್ದರೆಂದು ಸಾಬೀತಾಗಿದೆ. ಗೃಹಮಂತ್ರಿ ಪ್ರಭಾಕರ್ ರಾವ್ ಅವರಿಗೂ ಕುಪ್ರಸಿದ್ಧ ಅಪರಾಧಿ ಕೋಕ್‌ದಾಸ್ ಅವರಿಗೂ ಇದ್ದ, ಸಖತ್ವವನ್ನು ಕೆಣಕಲು ಹೋದ, ಪೋಲೀಸರು ಕೈ ಸುಟ್ಟು ಕೊಂಡರು. ರಾಜಕೀಯಸ್ಥರ ಕುತಂತ್ರಗಳಿಂದ ಕಾರ್ಮಿಕ ಮತ್ತು

ವಿದ್ಯಾರಂಗಗಳು ಕೊಳೆತು ನಾರುತ್ತಿವೆ. ಇಂಥ ಪಾಶವೀ ವೃತ್ತಿಗಳ ಪಟ್ಟಿಗೆ ಕೊನೆಯಿಲ್ಲ.

ಇಂಥ ಬೆನ್ನೆಲಬು ಇಲ್ಲದ ಸ್ವಾರ್ಥಸಾಧಕ ಪ್ರತಿನಿಧಿಗಳು ಸಹಜ ಗುಣ ವಂತ, ನಾಯಕರುಗಳನ್ನು ನಿಸ್ಸಾರರನ್ನಾಗಿ ಮಾಡುವ ಕಲೆಯ ಪಂಡಿತ ರಾಗಿದ್ದಾರೆ. ದೊಡ್ಡ ಜವಾಬ್ದಾರಿಗಳನ್ನು ಹೊತ್ತ ಹಿರಿಯ ಸಂಸತ್ತು ಮತ್ತು ವಿಧಾನಸಭೆಯ ಸದಸ್ಯರುಗಳು ನಾಚಿಕೆ ಇಲ್ಲದೆ ದೊಡ್ಡ ಧ್ವನಿ ಯಲ್ಲಿ ಪ್ರದರ್ಶಿಸುವ ಮುಖಸ್ತುತಿ ಅಸಹ್ಯವಾಗಿದೆ. ಇಂಥ ಕೀಳು ಸ್ವಭಾವದ ಸದಸ್ಯರಿಂದ ಸುತ್ತುವರಿದ ನಾಯಕ ಜನಹಿತ ಮರೆತು, ಸರ್ವಾಧಿಕಾರಿಯಾಗುವುದು ಬಹು ಸುಲಭ ನಾಯಕ ಮುಗ್ಗರಿಸದಂತೆ ಮಾರ್ಗದರ್ಶನ ಕೊಡುವ ಶಕ್ತಿಯನ್ನೂ ಸಂಪೂರ್ಣವಾಗಿ ಕಳೆದು ಕೊಂಡಿದ್ದಾರೆ

ಈ ಹೇಯ ನಡವಳಿಕೆಗಳಿಂದ, ಪ್ರಜಾಪ್ರಭುತ್ವದ ಉಪಯುಕ್ತತೆಯನ್ನು ಪ್ರಶ್ನಿಸುವ ಪ್ರಮೇಯ ಒದಗಿದೆ. ಮತ ಕೊಟ್ಟು ಮೇಲೇರಿಸಿದ ಮಾನ್ಯರು ವ್ಯಥೆ ಪಡುವುದಲ್ಲದೆ. ಪರದೇಶದವರು, ನಮ್ಮನ್ನು ಕಡೆಗಣಿ ಸುತ್ತಿದ್ದಾರೆ. ಪ್ರಜಾತಂತ್ರದ ನಡವಳಿಕೆ ಕುಸಿಯುತ್ತಿರುವ ವೇಗ ನೋಡಿದರೆ, ಯಾವಪಕ್ಷ ಅತಿ ಜಾಸ್ತಿ, ಹಾನಿ, ನೋವು, ಸಾವುಗಳನ್ನು ಮಾಡಲು ಶಕ್ತವೊ ಎಂಬುದರ ಮೇಲೆ, ಶಾಸನ ವಿಷಯಗಳು ತೀರ್ಮಾನ ವಾಗಬೇಕಾದ ಕಾಲ ದೂರವಿಲ್ಲ

ರಾಷ್ಟ್ರಾಭಿವೃದ್ಧಿಗೆ ಪ್ರಜಾಪ್ರತಿನಿಧಿಗಳ, ಪಾತ್ರ ಪ್ರಮುಖ ಮತ್ತು ಅನಿವಾರ್ಯ, ರಾಷ್ಟ್ರದ ದುರ್ಘಟನೆಗಳಿಗೆಲ್ಲ ತಮ್ಮ ಜವಾಬ್ದಾರಿಯನ್ನು ಜಾಡಿಸಲು ಅಸಾಧ್ಯ. ಸಂಸತ್ತು ಮತ್ತು ವಿಧಾನ ಸಭಾ ಸದಸ್ಯ (M.P. ಮತ್ತು M.L.A.) ಎಂಬ ಪದಗಳ ಹಿರಿಮೆಯ ಅರ್ಥ ಅನೇ ಕರು ಅರಿತುಕೊಳ್ಳದಿರುವುದು ದುರಾದೃಷ್ಟಕರ ಮನಸ್ಸಿನ ಸಹಜ ದೌರ್ಬಲ್ಯಗಳನ್ನು ಅದುಮಿಟ್ಟು ಎಲ್ಲಾ ಸೌಭಾಗ್ಯ, ಸಂಪತ್ತು, ಅಧಿ ಕಾರ, ಆಡಂಬರ, ಅನುಕೂಲತೆಗಳೆಲ್ಲ, ತನ್ನವೇ ಆಗಬೇಕು, ಎಂಬ ದುರಾಸೆಯನ್ನು ದೂರಮಾಡಿ, ಒಂದು ಸಲ ಸಂದ ಸವಲತ್ತುಗಳು ಸದಾ ತನ್ನಲ್ಲೇ, ಕೇಂದ್ರೀಕೃತವಾಗಿರಬೇಕು ಎಂಬ ಹುಚ್ಚನ್ನು ಬಿಡಿಸಿ

ಕೊಂಡರೆ, ತನ್ನ ಚುನಾಯಿತ ಸ್ಥಾನಕ್ಕೆ, ಶ್ರೇಷ್ಠ, ಅದ್ಭುತ, ಮತ್ತು ಅಶ್ಚರ್ಯಕರವಾದ ಶೋಬಗು, ಮೌಲ್ಯ ಬರುತ್ತದೆ. ನಮ್ಮ ಪ್ರತಿನಿಧಿಗಳಿಗೆ ಭಾರತದ ಭವ್ಯ ಭೂಮಿಯು ಪಕ್ವ ಪ್ರಜೆಗಳೆಲ್ಲ ಹೃದಯ ಪೂರ್ವಕವಾಗಿ, ತನ್ನ ಏಳ್ಗೆಯ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿದ್ದಾರೆ. ಅವರು, ಇಟ್ಟಿರುವ ನಂಬಿಕೆಯನ್ನು ಉಳಿಸಿಕೊಳ್ಳಬೇಕು, ಎಂಬ ಪ್ರತಿಜ್ಞೆ ಭಂಗವಾಗದಿದ್ದಿದ್ದರೆ ರಾಷ್ಟ್ರದ, ಚಿತ್ರ ಬಹು ರಮ್ಯವಾಗಿರುತ್ತಿತ್ತು.

ಆಡಳಿತದ ಅಪರಾಧಗಳನ್ನು ಅರಿಸಿ ತೋರಿಸುತ್ತಿರುವುದು, ಸಂತೋಷದ ವಿಚಾರವಲ್ಲ, ಬಹು ಸಂಕಟದಿಂದ ಹೃದಯಾಂತರಾಳದಿಂದ ಸಿಡಿದು ಬಂದ ನೋವಿನಿಂದ ಬರೆಯುತ್ತಿದ್ದೇನೆ, ಈ ಅಪಾದನೆಗಳ ನಾನು ಕೂಡ ಶಾಮೀಲು ಎಂಬುದನ್ನು ಅರಿತು ಒಪ್ಪಿ ತಲೆ ತಗ್ಗಿಸುತ್ತೇನೆ, ತಪ್ಪನ್ನೂ ತಿದ್ದುಕೊಂಡು ಆಸೆಗಳನ್ನೂ ಆದಷ್ಟು ಅದುಮಿ ನಿರಂತರ ನರಳುತ್ತಿರುವ ಅಶಕ್ತರ, ನೆರವಿಗೆ ಕಿಂಚಿತ್ತಾದರೂ ಸಹಾಯುವಾಗಲೆಂಬ ಹಂಬಲದ ಅರಿಕೆ ಇದು

ಕೈ ಮುಗಿದು ನಿಮ್ಮನ್ನು ಕೇಳಿಕೊಳ್ಳುತ್ತೇನೆ. ನಿಮ್ಮ ಆಲೋಚನೆ ಮತ್ತು ಕಾರ್ಯ ರೀತಿಗಳನ್ನು ಪರಿಷ್ಕರಿಸಿ. ನೀವು ಪ್ರಜಾಪ್ರಭುತ್ವದ ಮತ್ತು ಸಂವಿಧಾನದ ಆಶ್ರಯುಧಾತರು. ನಿಮ್ಮ ವರ್ತನೆ ಆ, ಅತ್ಯುಚ್ಛ ಭಾವನೆಗಳಿಗೆ ಅರ್ಥ ಕೊಡಲಿ ನಿಮ್ಮ ರಕ್ತ ಭಾರತಿ, ನಿಮ್ಮ ಮತ ಭಾರತಿ, ನಿಮ್ಮ ಕುಲ ಭಾರತಿ, ನಿಮ್ಮ ಜಾತಿ ಭಾರತಿ, ನಿಮ್ಮ ದೇವರು ಭಾರತಿ. ಮಿಥ್ಯ ದೇವ ಮಾನವರ ಹಿಡಿತದಿಂದ ಹೊರಬನ್ನಿ. ಹಿಂದು ಮುಸ್ಲಿಂ, ಕ್ರೈಸ್ತ, ಸಿಕ್ಕರು ಸರ್ವ ಮತಗಳ ನಿರ್ಗತಿಕರನ್ನು ನಿಮ್ಮ ನಿತ್ಯಾರಾಧನಾ ಮೂರ್ತಿಗಳನ್ನಾಗಿಸಿ. ಈ ರಾಷ್ಟ್ರದ ನಿರ್ಮಾಪಕರಾಗಿ. ನಿಮ್ಮ ಕೀರ್ತಿ ಭಾರತದ ಇತಿಹಾಸದಲ್ಲಿ ಚಿರಸ್ಥಾಯಿಯಾಗಲಿ. ರಾಷ್ಟ್ರದ ಅಜ್ಞಾನಿಗಳು, ಅನಕ್ಷರಸ್ಥರು, ಅಶಕ್ತರು, ಆಶ್ರಯ ಹೀನರು, ನಿಮ್ಮನ್ನು ತುಂಬು ಹೃದಯದಿಂದ, ಆಶೀರ್ವದಿಸುತ್ತಾರೆ. ಅದೇ ನಿಮ್ಮ ಕಿರೀಟ, ಅದರಿಂದಲೇ ನಿಮ್ಮ ವಂಶದ ಪಾವನ. ಮಹಾತ್ಮ ಗಾಂಧಿಯವರ ಅಹಿಂಸಾ ಧರ್ಮ ನಿಮ್ಮ ಕೈ ಹಿಡಿದು ನಡೆಸಲಿ.

# ಸಂಕಲ್ಪ ಮತ್ತು ಸಮಾಪ್ತಿ

ಶತಮಾನಗಳ ಕಾಲ ಪರಕೀಯರ ಕಾಟದಿಂದ ಕಂಗೆಟ್ಟಿದ್ದೆವು. ಈ ದಿವ್ಯ ಮಾತೃಭೂಮಿಯ ಸಂಕೋಲೆ ಕಿತ್ತೆಸೆಯಲು ತಿಲಕ್, ಗೋಖಲೆ, ದೇಶಬಂಧು ರಾಜಾರಾಮಮೋಹನ್‌ರಾಯ್, ಗಾಂಧೀಜಿ, ನೆಹರು, ರಾಜೇಂದ್ರ ಪ್ರಸಾದ್, ಸರ್ದಾರ್, ರಾಜಾಜಿ, ಮುಂತಾದ ತೇಜಸ್ವಿಗಳ ಪುಂಜ ಹೊರ ಬಂತು. ಆ ಮಹಾಪುರುಷರು ಆಹುತಿಯಿಂದ ಅದ್ಭುತ ಕಾರ್ಯ ಕೈಗೂಡಿಸಿಕೊಂಡರು ಪರಕೀಯರನ್ನು ಹೊರ ದೂಡಲು ಸಮರ್ಥರಾದರು. ಅಂಥ ನಿಜಮಾನವರ ಬಹುಸಂಖ್ಯೆಯ ಉದಯದಿಂದ ನಮ್ಮ ಶತಮಾನಗಳ ದಾಸ್ಯದ ಶೃಂಖಲೆ ಕಿತ್ತುಹೋಯಿತು.

ಆ ಮಹಾನುಭಾವರು, ಕಂಡ ಸರ್ವರ ಸುಖದ ಕನಸು ಕೈಗೂಡಿಸಿಕೊಳ್ಳಬೇಕಾಗಿದೆ. ನೈತಿಕ ಬಲದ ನಮ್ಮ ಹಿರಿಯರು, ರಕ್ತ ಹರಿಸಿ ಗಳಿಸಿದ ರಾಜಕೀಯ ಸ್ವತಂತ್ರ್ಯವನ್ನು ನಿರಂತರವಾಗಿ ಅಭಿವೃದ್ಧಿಪಡಿಸಿ, ಆನಂದವನ್ನು ಅನುಭವಿಸುವುದು ಪ್ರತಿ ಭಾರತೀಯ – ಹಿಂದು, ಮುಸಲ್ಮಾನ, ಕ್ರೈಸ್ತ, ಬೌದ್ಧ – ಎಲ್ಲರ ಆಜನ್ಮ ಹಕ್ಕಾಗಿದೆ.

ಸ್ವಾತಂತ್ರ್ಯ ಬಂದು ಅರ್ಧ ಶತಮಾನ ಸಂದರೂ, ನಮ್ಮವರ ಕುತಂತ್ರ, ಕಂಟಕತನ, ಕಪಿಮುಷ್ಟಿ ವ್ಯಸನಗಳಿಂದ ತಳಗುಂದಿದ್ದೇವೆ. ಕಕ್ಕಾಬಿಕ್ಕಿಯಾಗಿದ್ದೇವೆ. ಕಷ್ಟ ವ್ಯಸನಕ್ಕೊಳಗಾಗಿ ಕರಾಳ ದಿನಗಳನ್ನು ತಳ್ಳುತ್ತಿದ್ದೇವೆ. ಮಧ್ಯದವರಾದ ನಾವು, ನಮ್ಮ ಜವಾಬ್ದಾರಿಗಳಿಂದ, ಜಾರಿಕೆಗಳಿಂದ, ನಮ್ಮ ಪೀಳಿಗೆಗೆ ಪೀಡಿತರಾಗಿದ್ದೇವೆ. ರಾಷ್ಟ್ರದ ಪ್ರಯಾಣ, ಸರಿಯಾದ ದಿಕ್ಕಿನಲ್ಲಿ ಮುಂದುವರಿಯುವಂತೆ ಮಾಡುವುದು ಸರ್ವರ ಜವಾಬ್ದಾರಿ. ಪ್ರಪಂಚದ ಮೂಲೆ ಮೂಲೆಯ ಸಹೃದಯರು ನಮ್ಮ ಏಳು ಬೀಳುಗಳನ್ನು, ಸಮೀಕ್ಷಿಸುತ್ತಿದ್ದಾರೆ. ವಿಶ್ವಕ್ಕೆಲ್ಲಾ ನಾವೇ ಹೊಣೆ ಎಂಬ, ನಮ್ಮ ಶ್ರೇಷ್ಠ ಸಂಸ್ಕೃತಿಗೆ ಒದಗಿರುವ ಆಘಾತಕ್ಕೆ ಪಶ್ಚಾತ್ತಾಪ ಪಡುತ್ತಿದ್ದಾರೆ. ನಮ್ಮ ಹಿರಿಯರ ಪ್ರಯಾಸದಿಂದ ನಿರ್ಮಿತ

ವಾಗಿರುವ ಭಾರತದ ದೊಡ್ಡ ಪ್ರಜಾಪ್ರಭುತ್ವಕ್ಕೆ ಬಹು ದೊಡ್ಡ ಜವಾಬ್ದಾರಿ ಇದೆ. ಇನ್ನೂ ಗುಲಾಮಗಿರಿಯಲ್ಲಿ ತೊಳಲುತ್ತಿರುವ ಅನೇಕ ರಾಷ್ಟ್ರಗಳು, ತಮ್ಮ ನೆರವಿಗೆ ಕೈಬೀಸಿ ಕರೆಯುತ್ತಿವೆ. ಇಂದು ಜಗತ್ತು ಉದ್ರಿಕ್ತ ಸ್ಥಿತಿಯಲ್ಲಿದೆ. 1992ರಲ್ಲಿ, ಜಗತ್ತಿನಾದ್ಯಂತ ರಕ್ಷಣೆಗಾಗಿ, 9,500 ಕೋಟಿ ಡಾಲರುಗಳು ವೆಚ್ಚವಾಗಿದೆ. ನಾಳೆ ಏನಾಗುತ್ತದೆ ಎಂದು ಊಹಿಸಲು ಅಸಾಧ್ಯ. ಯಾವ ಕ್ಷಣವಲ್ಲಾದರೂ, ಅದು ಸರ್ವ ಮಾರಕ ಯುದ್ಧ ರೂಪದಲ್ಲಿ ಸಿಡಿದೀತು. ಲೋಕಸ್ಥಿತಿ ಸಂಪೂರ್ಣ ಹಾಳಾಗುವ ಮುನ್ನ, ಭಾರತ ಪ್ರಬಲ ರಾಷ್ಟ್ರವಾಗಬೇಕು, ಆತ್ಮಾವಲಂಬಿಯಾಗಬೇಕು. ಆಂತರಿಕ ಸ್ಥಿತಿ ಬಲಪಡಿಸಿ, ಹೊರ ಪ್ರಪಂಚದ ಸಹಾಯಕ್ಕೆ ಬೇಗ ನುಗ್ಗಬೇಕಾಗಿದೆ. ವಿಶ್ವವಿನಾಶ ತಡೆಯಬೇಕಾಗಿದೆ. ಮಾನವ ಸ್ವಾತಂತ್ರ್ಯದ ಹಾಗೂ ಘನತೆ, ಸಮಾನತೆಗಳ ಆಧಾರದ ಮೇಲೆ, ಶಾಶ್ವತ ನಾಗರೀಕತೆ ಮತ್ತು ಸಂಸ್ಕೃತಿಗಳನ್ನು ಸೃಷ್ಟಿಸುವ ಮಹತ್ತರ ಜವಾಬ್ದಾರಿಯನ್ನು ಸ್ವಾತಂತ್ರ್ಯ ತಂದಿದೆ. ಇಂದು ನಮ್ಮ ಮುಂದೆ ಒಂದು ದೊಡ್ಡ ಸವಾಲು ಕಾಯ್ದಿದೆ. ನಮ್ಮ ಆಂತರಿಕ ಸಮಸ್ಯೆಗಳನ್ನು ಪರಿಹರಿಸಿಕೊಂಡು, ಗೆದ್ದು, ಸೇವಾ ಮನೋಭಾವದಿಂದ ವಿಶ್ವದ ಮುಂದಾಳುಗಳಾಗಬಹುದು. ಸೋತು ಪುನಃಗುಲಾಮರಾಗಿ, ಸರ್ವರ ಅಡಿಯಾಳಾಗಬಹುದು. ಈ ಅಧಮ್ಯ ಚೈತನ್ಯದ ಸನಾತನ ಸಂಸ್ಕೃತಿಗೆ ಸೋಲೆಂಬುದು ಇಲ್ಲ

ಬರೀ ಆಕ್ಷೇಪಣೆಯಿಂದ ಈ ಗಾಢ ಅಂಧಕಾರ ಅದೃಶ್ಯವಾಗದು ಒಬ್ಬೊಬ್ಬರು. ಒಂದೊಂದು, ಹಣತೆ ಹಚ್ಚಿದರೆ ಮಾತ್ರ, ಹೊಸ ಬೆಳಕು ಬಂದೀತು ಈ ದಿಸೆಯಲ್ಲಿ ಸುಗುಣರು, ಸಿದ್ಧಿಗೆ, ಧೃಡ ಸಂಕಲ್ಪ ಸ್ವೀಕರಿಸಬೇಕು. ಅಮೋಘ ಮತ್ತು ಅಸಾಧಾರಣ ಸಿದ್ಧಿಗೆ, ಸ್ವಾರ್ಥತ್ಯಾಗದ ಸಂಕಲ್ಪ ಅನಿವಾರ್ಯ. ಆದರ್ಶ ಧ್ಯೇಯ ಸಾಧನೆಗೆ. ದೃಢನಿಶ್ಚಯ, ಅಧಮ್ಯ ಎದೆಗಾರಿಕೆ, ಅತ್ಯವಶ್ಯಕ.

ಇತಿಹಾಸದ ದೀರ್ಘಯಾತ್ರೆ, ನಾನಾ ಆವರ್ತನೆಗಳನ್ನು ಅವಲೋಕಿಸಿದೆ.

ಒಮ್ಮೆ ಜನಾಂಗದ ಸತ್ವ ಜಾಗೃತಿ ; ಇನ್ನೊಮ್ಮೆ.
ಜಾಡ್ಯ. ದೌರ್ಬಲ್ಯ. ಇನ್ನೊಮ್ಮೆ,
ಉತ್ಕರ್ಷ, ಏಳಿಗೆ, ವೈಭವ, ಇನ್ನೊಮ್ಮೆ,
ಅಪಕರ್ಷ, ದುರ್ದೆಶೆ, ಅಧೋಗತಿ, ಇನ್ನೊಮ್ಮೆ,
ಆಕ್ರಮಣ, ದಾಸ್ಯ, ಅಪಮಾನ, ಮಗದೊಮ್ಮೆ,
ನವಜಾಗೃತಿ ಮತ್ತು, ಪುನರ್ನಿರ್ಮಾಣ.

ಜಾಗೃತಿ ಜನಾಂಗಗಳು, ರಾಷ್ಟ್ರದ ಸ್ವಾತಂತ್ರ್ಯ. ಹಿರಿಮೆ, ವೈಭವಗಳನ್ನು ಸದಾ ಕಾಪಾಡಿಕೊಂಡು ಬಂದಿದ್ದಾರೆ. ಭಾರತೀಯರೂ ಕೂಡ ಭೀಷ್ಮ ಪ್ರತಿಜ್ಞೆ ಕೈಗೊಳ್ಳಬೇಕು.

ನಮ್ಮ ಪಯಣದ ದಿಕ್ಕು ದಿಢೀರನೆ ಬದಲಾಗಬೇಕು. ಪಟ್ಟಭದ್ರ ಹಿತಾಸಕ್ತಿಯನ್ನು ಅಳಿಸಿ, ಪ್ರಜಾಪ್ರಭುತ್ವಕ್ಕೆ ಒದಗಿರುವ ಅಪಾಯವನ್ನು ತಪ್ಪಿಸಲು, ರಾಷ್ಟ್ರದ ರಾಜಕೀಯ ಜೀವನದಲ್ಲಿ ನಡೆದಿರುವ ಕಡು ತಪ್ಪುಗಳನ್ನು ತಿದ್ದುವ ಕಾರ್ಯ. ತಕ್ಷಣ ಕೈಗೆತ್ತಿಕೊಳ್ಳಬೇಕಾಗಿದೆ. ಪ್ರಜಾತಂತ್ರದ ವೃಕ್ಷ ಸುರಕ್ಷಿತವಾಗಿರಬೇಕಾದರೆ, ಅದರ ತಾಯಿ ಬೇರು, ಆಳವಾಗಿ ನಮ್ಮ ಮಣ್ಣಿನಲ್ಲಿ ಊರ್ಜಿತವಾಗುವವರೆಗೂ ಹಿತಕರ ವಾತಾವರಣ ಕಲ್ಪಿಸುವುದು ಪ್ರತಿ ಪ್ರಜೆಯ ಆದ್ಯ ಕರ್ತವ್ಯ. ಬಂಜರಾಗಿರುವ ರಾಜಕೀಯ ಪದ್ಧತಿ ಫಲಪ್ರದವಾಗಲು ಪ್ರಾಮಾಣಿಕತೆ ಪುನರ್‌ಸ್ಥಾಪನೆಯಾಗಬೇಕಾಗಿದೆ. ಉಚ್ಚಸ್ಥಾನದ ಗಣ್ಯರು ಮೆರಗು ಕೊಡುವ ಸೌಶೀಲ್ಯಗಳ ಮೇಲ್ಪಂಕ್ತಿ ಹಾಕಬೇಕಾಗಿದೆ ಹೊಸ ಆದರ್ಶದ ದಾರಿ ತೋರಿ, ಹೆಪ್ಪುಗಟ್ಟಿರುವ ಸಮಸ್ಯೆಗಳನ್ನು ಪರಿಹರಿಸಿ, ರಾಷ್ಟ್ರದ ಛಿದ್ರತೆಯನ್ನು ತಪ್ಪಿಸಬೇಕಾಗಿದೆ. ಸಾಮಾಜಿಕ, ರಾಜಕೀಯ, ಧಾರ್ಮಿಕ, ಆರ್ಥಿಕರಂಗಗಳು ತಮ್ಮ ಶುಭ್ರತೆಯನ್ನು ಸ್ಥಿರಪಡಿಸಕೊಳ್ಳಬೇಕಾಗಿದೆ.

ಸ್ವಾತಂತ್ರ್ಯಸಮರಕ್ಕೆ ನಡೆಸಿದಂತಹ ಅಹಿಂಸಾ ಸಮರ, ಅನಿವಾರ್ಯವಲ್ಲದೆ, ಅವಶ್ಯಕವಾಗಿದೆ.

ನೂರೇಳು ವಯಸ್ಸಾಯಿತು ಕಾಂಗ್ರೆಸ್ಸಿಗೆ, ಈ ಪಿತಾಮಹನೆ, ಅಜ್ಜನೆ, ತಪ್ಪು ನೆಪ್ಪುಗಳಿಗೆ, ಆಗು ಹೋಗುಗಳಿಗೆ ಜವಾಬ್ದಾರಿ ಹೊತ್ತು ಮುಂದೆ ಭಾರತ ಬದುಕಲು, ಸ್ವಾರ್ಥ ಬದಿಗೊತ್ತಿ ಶುಭ್ರರನ್ನು ಸಿಂಹಾಸನಕ್ಕೇರಿಸಬೇಕು. ಈ ಹಿರಿಯ, ತನ್ನ ಸಂಕುಚಿತಭಾವ ತೊರೆದು ರಾಷ್ಟ್ರಹಿತಕ್ಕಾಗಿ ವಿಶಾಲ ಮನೋಭಾವದಿಂದ ಎಲ್ಲಾ ಪಕ್ಷಗಳ ಪವಿತ್ರಾತ್ಮರ ಸಹಕಾರ ಕೋರುವುದು ಅನಿವಾರ್ಯ ಎಲ್ಲಾ ಪಕ್ಷಗಳು ಸುಗುಣರ ಮತ್ತು ದುರ್ಗುಣಿಗಳ ಪರಿಷೆ. ಸ್ವಜನ ಪಕ್ಷಪಾತ ಬದಿಗೊತ್ತಿ ಮುಂದಿನ ಪೀಳಿಗೆಯ ಕ್ಷೇಮ ಸಾಧಿಸಬೇಕಾಗಿದೆ. ಸಾವಧಾನತೆಯಿಂದ ಮುಂಜಾಗ್ರತೆ ವಹಿಸುವ, ಸಂದರ್ಭವನ್ನು ಕಳೆದುಕೊಂಡು ಪಶ್ಚಾತ್ತಾಪಪಡಬಾರದು ಜಪಾನಿನಲ್ಲಿ, ಅನೇಕಸಾರಿ, ಬಹು ಬಲದಿಂದ ಗೆದ್ದಿದ್ದ, ಲಿಬರಲ್ ಡೆಮೊಕ್ರಾಟಿಕ್ ಪಕ್ಷ, ಭ್ರಷ್ಟತೆ ಮುಂತಾದ ಲೋಕಾಪವಾದಗಳಿಂದ ಹೊರಬರಲು ಅಶಕ್ತವಾಯಿತು ಇದರ ಫಲವಾಗಿ, ಮೊನ್ನೆ. ಐವತ್ತನೆ ಪ್ರಧಾನಿಯಾಗಿ, ಸಣ್ಣಪಕ್ಷದ ಪ್ರಾಮಾಣಿಕ ಶ್ರೀಮಾನ್ ಮೊರಿಹಿರೊ ಅವರು ಬಂದಿರುವ ಕುತೂಹಲಕಾರಿ ಅಂಶ, ನಮ್ಮ ರಾಜಕಾರಣಿಗಳಿಗೆ ಬುದ್ಧಿಕಲಿಸಬೇಕು. ಅನಾಚಾರಗಳ ವಿರುದ್ಧ ಜನ ಬಂಡೇಳುವುದು ಸಹಜ ಹಳೆಯ ಪದ್ಧತಿ ಪತನವಾಗಿ ಹೊಸದು ಜಾರಿಗೆ ಬರಬೇಕಾದ ಸಂದರ್ಭದಲ್ಲಿ, ಸುಗುಣರು ಸಹನೆ ಮತ್ತು ಶ್ರದ್ಧೆವಹಿಸಬೇಕಾಗಿದೆ.

ಸರ್ವರೂ, ಮುಖ್ಯವಾಗಿ, ಯುವಜನ, ಸೂಕ್ತ, ರಾಜಕೀಯ, ಸಾಮಾಜಿಕ, ಆರ್ಥಿಕ, ಮತ್ತು ಆಧ್ಯಾತ್ಮಿಕ, ಸಂಕಲ್ಪಗಳನ್ನು ವೃದ್ಧಿಪಡಿಸಿಕೊಳ್ಳುವುದರ ಮೂಲಕ, ಈಗಿರುವ ಕಡು ಅಪಾಯಸ್ಥಿತಿಯನ್ನು ಬದಲಾಯಿಸಬಹುದು. ದೇಶ ಸಾಗುತ್ತಿರುವ ಬಗ್ಗೆ, ಚಿಂತೆ, ಆತಂಕ, ತೀವ್ರವಾಗಬೇಕು ಯೋಚಿಸುವವರ ಸಂಖ್ಯೆ ಅಪಾರವಾಗಬೇಕು. ಹತ ತೊಡುವವರು ಹೆಚ್ಚಬೇಕು ಸ್ವತಂತ್ರ್ಯ ಪೂರ್ವದಲ್ಲಿ ತುಂಬಿ ತುಳುಕುತ್ತಿದ್ದ ಉತ್ಸಾಹ ನೂರ್ಮಡಿಯಾಗಬೇಕು. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ ಭುಗಿಲೆದ್ದಂತೆ ಇಂದು ಆಗಬೇಕಾದ ಅವಶ್ಯಕತೆ ಬಂದಿದೆ ಕೇವಲ ಕೆಲವು ಸುಗುಣರ ಸಂಕಲ್ಪ ಕರೆಯಿಂದಲೇ

ರಾಷ್ಟ್ರದ ಸುಧಾರಣೆಗಳು ಪುನರ್‌ಸ್ಥಾಪನೆಯಾಗುವುದು. ಪ್ರಪಂಚವನ್ನೇ ಪ್ರವರ್ಧಮಾನಗೊಳಿಸುವ ಪ್ರಭಲ ಪ್ರಭಾವ ಸಂಕಲ್ಪಕ್ಕಿದೆ.

ಇಂದಿನ ನಾಯಕರುಗಳು ಯಾವ ರಾಜಕೀಯ ಪಕ್ಷಕ್ಕೆ ಸೇರಿರಲಿ ತಮ್ಮ ತಪ್ಪುಗಳನ್ನು ಒಪ್ಪಿಕೊಳ್ಳಬೇಕು. ಅಧಿಕಾರ ಹೊಂದಲು ಮತ್ತು ಉಳಿಸಿಕೊಂಡು ಹೋಗುವ ಆಸೆಯ ಆತುರದಲ್ಲಿ ಅಂಧರಾಗಿ, ನಡೆಯು ಬಾರದ್ದನ್ನು ನಡೆಸಿ ಆಗಿದೆ ಮಹದಪರಾಧ ಮಾಡಿರುವುದನ್ನು ಮನ ಸಾರ ಒಪ್ಪಿ, ಮುಂದಿನ ಪೀಳಿಗೆಯ ಹಿತಕ್ಕಾಗಿ, ತಮ್ಮ ನಡತೆಯನ್ನು ಮಾರ್ಪಡಿಸಬೇಕಾಗಿದೆ ಅನೇಕರು ಕೋಟ್ಯಾಧಿಪತಿಗಳಾಗಿದ್ದಾರೆ. ಆ ಪಾಪದ ಹಣವನ್ನು ರಾಷ್ಟ್ರ ಸುಖಕ್ಕೆ ಚೆಲ್ಲಬೇಕು. ಕೆರೆಯ ನೀರನ್ನು ಕೆರೆಗೆ ಚೆಲ್ಲಿ ಕೃತ ಕೃತ್ಯರಾಗಬೇಕು. ತಪ್ಪೊಪ್ಪಿಗೆ, ಪಶ್ಚಾತ್ತಾಪ ಬಹುಶ್ರೇಷ್ಠ. ಅವನೇ ಶೂರ, ಧೀರ, ವೀರ. ಅವನೇ ಸರ್ವಶ್ರೇಷ್ಠ ಜನತೆ ಖಂಡಿತ ಸ್ವಾಗತ ನೀಡುವರು. 1960ಕ್ಕೆ ಮುಂಚೆ ರಾಷ್ಟ್ರದ ನಾಯಕರು, ನೈತಿಕ ಮೌಲ್ಯಗಳಿಗೆ ಮಾನ್ಯತೆ ಕೊಡುತ್ತಿದ್ದಂತೆ, ಸರ್ವರೂ ಸುಗುಣಗಳನ್ನು ಅಪ್ಪಿಕೊಳ್ಳಬೇಕು. ಅವರ ಅನುಭವಗಳು ಪ್ರಾಮಾಣಿಕವಾಗಿ, ರಾಷ್ಟ್ರದ ಅಭಿವೃದ್ಧಿಗೆ ಒತ್ತೆ ಇಡಬೇಕು. ರಾಷ್ಟ್ರದ ಹಿತಕ್ಕಾಗಿ ಅಧಿಕಾರ ಅಂತಸ್ತು ಮತ್ತು ಹಣದ ವ್ಯಾಮೋಹಗಳಿಂದ ವಿಮುಕ್ತರಾಗಬೇಕು. ತಮ್ಮ ನಡವಳಿಕೆಯನ್ನು ಸಂಪೂರ್ಣವಾಗಿ ಬದಲಾಯಿಸಿಕೊಂಡು ಹೊಸ ಮನುಷ್ಯರಾಗಬೇಕು ಸರ್ವಸಾಧನೆಗೂ ಶಿಸ್ತು, ಸಂಯಮ ಅಂಕೆ, ಶಂಕೆ, ಮುಂತಾದ ಸ್ವಯಂ ಶಿಕ್ಷೆ, ಅನಿವಾರ್ಯ. ಪ್ರಕಾಶಮಾನ ವಾಗಲು ಪಂಚಿಗೆ ಬಿಗಿಕಟ್ಟು ಬೇಕೇ ಬೇಕು. ಲಗಾಮಿನಿಂದಲೇ ಕುದುರೆಯ, ಅದ್ಭುತ ಶಕ್ತಿ ಹೊರ ಹೊಮ್ಮಲು ಸಾಧ್ಯ. ಮಿತಿ ಕಲ್ಪಿಸಿದ ಆವಿ, ಮತ್ತು ಅನಿಲಗಳೇ ಅದ್ಭುತ ಚೈತನ್ಯಕಾರಿಯಾಗಲು ಸಾಧ್ಯ. ಹರಿದು ಹಾಳಾಗುತ್ತಿದ್ದ ನೀರನ್ನು ಕೊಳವೆಯೊಳಕ್ಕೆ ಬಗ್ಗಿಸುವುದ ರಿಂದಲೇ ವಿದ್ಯುತ್ ಹೊರ ಒರಲು ಸಾಧ್ಯ. ಅದೇ ರೀತಿ, ಶಿಸ್ತು, ಸಮರ್ಪಣೆ, ಯಥಾರ್ಥತೆ, ಪಾಪನಿವೇದನೆ ಮತ್ತು ಶ್ರಮದಿಂದಲೇ,

ಶ್ರೇಷ್ಠ ಕಾರ್ಯಗಳು ಮತ್ತು ಅಮೋಘ ಸಾಧನೆಗಳು ಲಭ್ಯ. ಸನಾತನ ನಿಜ ಸಂಸ್ಕೃತಿ-ವಿವೇಕಾನಂದ, ರವೀಂದ್ರನಾಥಠಾಕೂರ್, ಗಾಂಧೀಜಿ, ಪಂಡಿತ ನೆಹರು, ಕುವೆಂಪು ಮುಂತಾದ ಮಹಾಪುರುಷರ-ಸಂಸ್ಕೃತಿಯಲ್ಲಿ ಶಿಷ್ಯವೃತ್ತಿ ಪಡೆದು ಶಿಷ್ಟರಾದ ಯುವ ಜನತೆಯೇ ಭಾರತೀಯ, ಅಲ್ಲದೆ ವಿಶ್ವದ ಪರಿಪೂರ್ಣತೆಯ ಪರಾಗಲು ಸಾಧ್ಯ. ಅವರಿಂದಲೇ ಪ್ರಪಂಚಕ್ಕೆ ಮುಕ್ತಿ. ಅಂಥ ಜಲಪಾತದಂಥ ಚೈತನ್ಯಯುತರಾದ ತರುಣ, ತರುಣಿಯರ ಅನ್ಯೋನ್ಯವಾದ, ವ್ಯಕ್ತೀಭೂತವಾದ, ಕ್ರಿಯಾಶಕ್ತಿಯುತವಾದ. ಸಹಭಾಗಿತ್ವ ಇಂದು ಅತ್ಯವಶ್ಯಕ ಮತ್ತು ಅನಿವಾರ್ಯ. ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ, ಪ್ರತಿನಿತ್ಯದ ಆಡಳಿತ ನಿರ್ವಹಣೆಯಲ್ಲಿ ಯುವಕ ಯುವತಿಯರ, ಪಾತ್ರ ಅತ್ಯಗತ್ಯ. ಅವರ ಆಯ್ಕೆಗೆ, ಸಮಾಜದ ಭಾವನೆ, ವ್ಯಕ್ತಿ ಯೋಗ್ಯತೆ, ಘನತೆ, ಸೇವಾಶಕ್ತಿ, ಸರಳತೆ, ಗಾಂಧಿ ಸಂಸ್ಕೃತಿ. ಶ್ರಮ ಸಹಿಷ್ಣುತೆ, ಕಾಯಕದಲ್ಲಿ ಗೌರವ, ಸ್ವಸಂಪಾದನೆ, ಗ್ರಾಮೀಣ ಅನುಭವ. ಸರ್ವಧರ್ಮ ಸಮನ್ವಯ, ಮುಂತಾದ ಶ್ರೇಷ್ಠ ಗುಣಗಳು ಮಾತ್ರ ಚಿನ್ಹೆಯಾಗಬೇಕು. ಈ ಮೂರು ದಶಕಗಳಿಂದ ನಡೆದ-ಬರುತ್ತಿರುವ ವಂಶ. ಜಾತಿ, ಕುಲ, ಹಣ. ಪ್ರಾಂತೀಯತೆ, ಮುಂತಾದ ಕ್ಷುಲ್ಲಕ ಮತ್ತು ದುಷ್ಟ ಪ್ರಭಾವಗಳು ಕೊನೆಯಾಗಬೇಕು ರಾಜಕಾರಣಿಗಳ ಅತೀವ ಸ್ವಾರ್ಥತೆಯಿಂದ ಸಾಮಾನ್ಯ ಯುವಕರಿಗೆ ಅವಕಾಶ ಇಲ್ಲವಾಗಿದೆ. ಅವರು ದುಷ್ಟ ಮಾರ್ಗಗಳನ್ನು ಹಿಡಿಯುತ್ತಿದ್ದಾರೆ. ಪಂಜಾಬು, ಕಾಶ್ಮೀರ, ಅಸ್ಸಾಂ, ನಾಗಾಲ್ಯಾಂಡ್, ಆಂಧ್ರ ಪ್ರದೇಶ, ಮುಂತಾದ ಕಡೆಗಳಲ್ಲಿ ಯುವಕರು ಹಿಂಸಾಚರರಾಗಿರುವದಕ್ಕೆ ಇಳಿವಯಸ್ಸಿನ ಸ್ವಾರ್ಥ ರಾಜಕೀಯಸ್ಥರೇ ಮುಖ್ಯ ಕಾರಣ. ಅವರು ತಮ್ಮ ಮನಃಸಾಕ್ಷಿಯನ್ನು ಪರೀಕ್ಷಿಸಿಕೊಳ್ಳಬೇಕಾದ ಸನ್ನಿವೇಶ ಬಂದಿದೆ. ಯುವಶಕ್ತಿ ಪೋಲಾದ ರಾಷ್ಟ್ರಕ್ಕೆ ಭವಿಷ್ಯವಿಲ್ಲ. ತರುಣರ ಚೈತನ್ಯ ಚೆಲ್ಲಾಪಿಲ್ಲಿಯಾದ ದೇಶದ ಅಭಿವೃದ್ಧಿ ಅಸಾಧ್ಯ. ಶಿಷ್ಟ ತರುಣ ತರುಣಿಯರ, ಬುದ್ಧಿ ಶಕ್ತಿಗಳನ್ನು ಸಾರ್ಥಕ ಪಡಿಸಿಕೊಳ್ಳಲು ಸರ್ವಪ್ರಯತ್ನ ಮಾಡಬೇಕಾದುದು ಆದರ್ಶನಾಯಕನ ಲಕ್ಷಣ.

ರಾಷ್ಟ್ರದ ಉಳುವಿಗಾಗಿ ಪ್ರಜಾಪ್ರತಿನಿಧಿಗಳು ಕೆಲವು ಬದಲಾವಣೆಗಳನ್ನು ತಕ್ಷಣ ತರುವ, ದೃಡ ನಿರ್ಧಾರ ಕೈಗೊಳ್ಳಬೇಕಾಗಿದೆ.

ಗುಲಾಮ ಗುಮಾಸ್ತರ ಉತ್ಪತ್ತಿಗೆ ಪ್ರಾರಂಭವಾದ ಇಂಗ್ಲೀಷ ವಿದ್ಯಾಭ್ಯಾಸದ ಉದ್ದೇಶ ಬದಲಾಗಬೇಕು. ಇಂಗ್ಲೀಷ್ ಖಂಡಿತ ಬೇಕು. ಪ್ರಪಂಚ ಪರಿಚಯಕ್ಕೆ ಅದು ಅನಿವಾರ್ಯ. ಜೊತೆಗೆ ಪ್ರಾಂತೀಯ ಭಾಷೆಗಳ ಪಾಂಡಿತ್ಯ ಅತ್ಯಾವಶ್ಯಕ. ಸ್ವಾತಂತ್ರ್ಯ ಭಾರತದಲ್ಲಿ, ಸ್ವಾತಂತ್ರ ಮತ್ತು ಪ್ರಾಮಾಣಿಕ ಜೀವನ ನಡೆಸುವ ಹುಮ್ಮಸ್ಸು ವಿದ್ಯಾಭ್ಯಾಸ ತುಂಬಬೇಕು. ಇಡೀ ವಿಶ್ವದ ಪರಿಚಯ, ಸಮ ಅವಕಾಶ, ಸಮಾಜ ಜ್ಞಾನ, ವಿಶಾಲದೃಷ್ಟಿ, ಉದಾರ ಮನಸ್ಸು ಪ್ರಾಜ್ಞ ಪೌರತ್ವ, ವಿಶ್ವ ಸಹೋದರತ್ವ, ಯಥಾದೃಷ್ಟಿ, ಘನತೆ, ಕೀರ್ತಿ, ನ್ಯಾಯ ನಿಷ್ಠೆ, ನಿಷ್ಪಕ್ಷಪಟ್ಯ, ಪ್ರಾಮಾಣಿಕತನ, ವಿವೇಚನಾಪರತೆ, ಸರಳತೆ, ಆತ್ಮವಿಶ್ವಾಸ, ವೈಜ್ಞಾನಿಕ ಮನೋಭಾವ, ಇವುಗಳ ಬೆಳವಣಿಗೆಯೇ ವಿದ್ಯಾಭ್ಯಾಸದ ಮುಖ್ಯ ಗುರಿಯಾಗಬೇಕು. ತಾರುಣ್ಯ ಎಂದರೆ ಮೈ ಮುರಿದು ಕೆಲಸ ಮಾಡುವುದು, ಜವರರಿಸುವುದು, ಶೂರನಾಗುವುದು, ಸದ್ಗುಣಗಳ ಗಣಿಯಾಗುವುದು ಸ್ವತಂತ್ರ ಭಾರತದಲ್ಲಿ ಸ್ವತಂತ್ರವಾಗಿ ಪ್ರಜತೆಯಿಂದ ಬಾಳುವ ವಿದ್ಯೆ ಲಭಿಸಬೇಕು. ಮಾನವಕೋಟಿಯ ಯೋಗಕ್ಷೇಮ ಸಾಧನೆಗೆ ಶ್ರಮಿಸುವ, ಉತ್ಸಾಹ ಹುಟ್ಟಿಸುವ, ದೇಶಪ್ರೇಮ ಪ್ರೇರಣೆ, ಜನತಾ ಸೇವೆಯ ಉತ್ಕಟಾಭಿಲಾಷೆಗಳನ್ನು ಬೆಳೆಸುವ, ಅಲ್ಲದೆ, ಜೀವನವನ್ನು ಧ್ಯೇಯ, ನಿಷ್ಠೆ ಸಾರ್ಥಕವು, ಆಗುವಂತೆ ರೂಪಿಸುವ ಶಿಕ್ಷಣ ಪದ್ಧತಿ ನಮ್ಮ ಸಂತಾನಕ್ಕೆ ಸಲ್ಲಬೇಕು.

ಪ್ರಜಾಪ್ರಭುತ್ವದಲ್ಲಿ ರಾಜಕೀಯ ವ್ಯವಸ್ಥೆ ಬಹು ಪ್ರಮುಖ. ಇಂದಿನ ಚುನಾವಣೆ ಪದ್ಧತಿ, ಸಂಪೂರ್ಣ ಮಾರ್ಪಾಡಾಗಬೇಕು. ಪ್ರಜೆಗಳು ಸ್ವತಃ ನೇರವಾಗಿ ಒಡೆಯರಾಗಿ ಸರ್ಕಾರದ ಲಗಾಮು ಹಿಡಿದು ಸವಾರಿ ಮಾಡುವ ಏರ್ಪಾಡು ಅತ್ಯವಶ್ಯಕ. ಅಭ್ಯರ್ಥಿಯ ಆಯ್ಕೆಯಲ್ಲಿ ಮತದಾರರ ಸಾರ್ವಭೌಮತ್ವ ಮೊಟಕಾಗಬಾರದು. ಅಭ್ಯರ್ಥಿ ಎಲ್ಲಾ ಹಂತ

ಗಳ ಅನುಭವ ಪಡೆದಿರಬೇಕು. ನಾಯಕರನ್ನು ಮೇಲೇರಿಸುವುದು ಮತ್ತು ಹಿಂಬಾಗಿಲಿನಿಂದ ಬರುವುದು ಪ್ರಜಾತಂತ್ರದ ಕೊಲೆ. ಎಲ್ಲಾ ಹಂತಗಳಲ್ಲೂ, ಸಾಮಾನ್ಯರು ತಮ್ಮ ನಾಯಕನನ್ನು ವಿಶ್ವಾಸದಿಂದ ಆರಿಸಬೇಕು ಅಂಥ ನಾಯಕನ ಹೆಗ್ಗುರುತು, ಪ್ರತಿಫಲಾಪೇಕ್ಷೆ ಇಲ್ಲದ ಜನಸೇವೆ. ಮತ ಚಲಾವಣೆ ಮುಗಿದ ಮರುಘಳಿಗೆಯಲ್ಲೇ ಮತದಾರ, ಪರಕೀಯ ಮತ್ತು ಅಪರಿಚಿತನಾಗಬಾರದು.

ಸುಗುಣರು ಮತ್ತು ಅನುಭವಿಗಳು ಮಾತ್ರ ವಿಧಾನಸಭೆ ಮತ್ತು ಸಂಸತ್ತುಗಳಿಗೆ ಆಯ್ಕೆಯಾಗಬೇಕು ಎಂಥ ಸಂಪದ್ಭರಿತ ರಾಷ್ಟ್ರವಾದರೂ ರಾಜಕೀಯಸ್ಥರಿಗೆ ತರಬೇತಿ ಕ್ಷೇತ್ರವಾಗಬಾರದು. ಕಾಲೇಜಿನಿಂದ ನೇರ, ವಿಧಾನಸಭೆಗೆ ಮತ್ತು ಸಂಸತ್ತಿಗೆ ಹೋಗಿ, ಮಂತ್ರಿಗಳಾಗುವುದು ಈ ರಾಷ್ಟ್ರದ ದುರ ದೃಷ್ಟ

ಗೆದ್ದ ಪ್ರತಿನಿಧಿ, ಅಧಕ್ಷನಾದರೂ, ಲಂಚಕೋರನಾದರೂ ಘಟಿಂಗನಾದರೂ ಅವನ ಬದಲಾವಣೆ ಅಸಾಧ್ಯ ಅಯೋಗ್ಯರನ್ನು ಆಯ್ದು. ಆದಷ್ಟುಬೇಗನೆ ಹೊರಹಾಕುವ ವ್ಯವಸ್ಥೆ, ಅತ್ಯವಶ್ಯಕ. ಇಂದು ಎಂಥ ದೇಶ ಪ್ರೇಮಿಯಾದರೂ ಹಣದ ಹಣದ ಥೈಲಿ, ಹೆಂಡದ ಪಿಪಾಯಿ ಇಲ್ಲದೆ ಗೆಲ್ಲಲು ಅಸಾಧ್ಯ. ಎಷ್ಟೇ ಬುದ್ಧಿವಂತನಾದರೂ, ದೇಶ ಭಕ್ತನಾದರೂ, ಸುಗುಣನಾದರೂ, ತನ್ನ ರಾಜಕೀಯ ಕುಶಲತೆಯನ್ನು ಸಮಾಜಕ್ಕೆ ಅರ್ಪಿಸುವ ಅವಕಾಶ ಅಸಾಧ್ಯ ಪ್ರಜಾತಂತ್ರ ಉಳಿಯಲು ಕಾಸು ಖರ್ಚಿಲ್ಲದ ಚುನಾವಣೆ ಸಾಧ್ಯವಾಗಬೇಕು. ಪಕ್ಷಗಳು ಕಡಿಮೆಯಾಗಬೇಕು. ಪಕ್ಷಗಳ ನೈತಿಕಮಟ್ಟ ಮೇಲೇರಬೇಕು.

ಚುನಾವಣೆಗೆ ಮುಂದೆ ಆರು ತಿಂಗಳು ಕಾಲ, ಅಧ್ಯಕ್ಷರ ಆಡಳಿತವಿರಬೇಕು. ಸಾಮಾನ್ಯರು ತಮ್ಮ ಇಚ್ಛೆಯನ್ನು ತಿಳಿಸುವುದಕ್ಕೆ ಅನಿರ್ಭಂದ ಮತ್ತು ನ್ಯಾಯ ಸಮ್ಮತವಾದ, ನಿಷ್ಕಳಂಕವಾದ ಚುನಾವಣೆ ಅನಿವಾರ್ಯ. ಪ್ರತಿಯೊಬ್ಬರು ಮತ ಚಲಾಯಿಸಬೇಕಾದ ಕಟ್ಟುಬರಬೇಕು. ಸಂವಿಧಾನ ಸೃಷ್ಟಿಸಿರುವ, ಸಂಸ್ಥೆಗಳ ಪುನರುಜ್ಜೀವನ ಅತ್ಯಾವಶ್ಯಕ.

ಚಿತ್ರಗಳ, ಬಾವುಟಗಳ, ಮೋಟಾರು ಗಾಡಿಗಳ ಪ್ರದರ್ಶನದ ಪೈಪೋಟಿ ನಿಲ್ಲಬೇಕು. ವೈಯಕ್ತಿಕವಾಗಿ ಮತದಾರರ ಸಂದರ್ಶನಗಳ ನಿಷೇಧವಿರಬೇಕು. ಈಗ ನಮ್ಮ ದೇಶದಲ್ಲಿ ಪ್ರತಿದಿನ, ಒಂದಲ್ಲ ಒಂದು ಚುನಾವಣೆ ನಡೆಯುತ್ತಲೇ ಇದೆ. ಪ್ರಜಾತಂತ್ರದ ಎಲ್ಲಾ ಸಂಸ್ಥೆಗಳ, ಪಂಚಾಯ್ತಿ, ಮಂಡಳ, ಜಿಲ್ಲಾ ಪರಿಷತ್ತು, ವಿಧಾನಸಭೆ ಮತ್ತು ಸಂಸತ್ತು ಒಂದೇಸಲ ನಡೆಸುವ ಏರ್ಪಾಡು ಅತ್ಯಾವಶ್ಯಕ ಮನೆಮನೆಗೆ, ಊರು ಊರಿಗೆ, ಹೋಗಿ, ಭಾರಿ ಸಭೆಗಳ ಭಾಷಣ ಮಾಡುವದಕ್ಕೆ ಬದಲಾಗಿ, ಎಲ್ಲಾ ಪಕ್ಷಗಳಿಗೂ ಎಲ್ಲಾ ಮಾಧ್ಯಮಗಳ ಮೂಲಕ ಪ್ರಚಾರ ಮಾಡುವ ಏರ್ಪಾಡುಗಳಿಂದ ಅನಾವಶ್ಯಕವಾದ ಖರ್ಚು ನಿಲ್ಲುತ್ತದೆ.

ವಿದ್ಯಾಭ್ಯಾಸಕ್ಕೆ ಲಕ್ಷಗಟ್ಟಲೆ ವಂತಿಗೆ, ಮತ್ತಷ್ಟು ಲಕ್ಷ ಹಣ ಕೊಟ್ಟು, ನೌಕರಿ ಸಂಪಾದಿಸಿಕೊಂಡ ಅಧಿಕಾರಿ, ಪ್ರಾಮಾಣಿಕನಾಗಿರಲು ಅಸಾಧ್ಯ. ಅಂತೆಯೇ ಚುನಾವಣೆಗೆ ಬೇಕಾದ ಅಪಾರ ಮೊತ್ತದ ಹಣ ಸಂಗ್ರಹಣವೇ ರಾಜಕೀಯ ಭ್ರಷ್ಟತೆಗೆ ಮೂಲಕಾರಣ. ಗದ್ದ ಪ್ರತಿನಿಧಿ ಸಮಾಜ ದ್ರೋಹಿಗಳ ಅಡಿಯಾಳಾಗದೆ ವಿಧಿ ಇಲ್ಲ. ಭ್ರಷ್ಟಾಚಾರ ನಮ್ಮ ಜೀವನದ ಅನಿವಾರ್ಯ ಅಂಗವೆಂಬ ಕುಖ್ಯಾತಿ ಗಳಿಸಿದೆ. ಎಂಜಲು ಕೊಡದೆ ಯಾವ ಕೆಲಸವೂ ಅಸಾಧ್ಯ ಸರ್ಕಾರದ ತೆರಿಗೆ ಕೊಡಲು ಲಂಚ ಕೊಡಬೇಕು. ನಿಸ್ಪೃಹ ವ್ಯಕ್ತಿಗಳಿಗೆ ಉಸಿರು ಕಟ್ಟಿದೆ. ಲಂಚಕೋರ ಅಧಿಕಾರಿಗಳು "ಈ ಹುದ್ದೆಗೆ (ಜಾಗಕ್ಕೆ) ಬರಲು ಮಂತ್ರಿಗಳಿಗೆ . ಲಕ್ಷ ಲಂಚ ಕೊಟ್ಟು ಬಂದಿದ್ದೇನೆ" ಎಂದು ನಿರ್ಭಯ ನಿರ್ಲಜ್ಜೆಗಳಿಂದ ಬಹಿರಂಗವಾಗಿ ಪ್ರಕಟಿಸುತ್ತಿದ್ದಾರೆ. ಲಂಚ ಕೊಡುವವರ ತೆಗೆದುಕೊಳ್ಳುವವರ, ಮತ್ತು ಕೊಡಿಸುವ ರಾಜಕೀಯ ದಳ್ಳಾಳಿಗಳ ಭರಾಟೆ ಸ್ಪಷ್ಟವಾಗಿದೆ. ಈ ಆಸುರೀ ಮುಕ್ಕೂಟವನ್ನು ಗೌರವಾನ್ವಿತ ವ್ಯಕ್ತಿಗಳನ್ನಾಗಿ ಸಮಾಜ ಅಂಗೀಕರಿಸಿರುವುದು ರಾಷ್ಟ್ರದ ದುರಂತ, ವ್ಯಭಿಚಾರಕ್ಕಿಂತ ಅನಿಷ್ಟವಾಗಿರುವ ಭ್ರಷ್ಟಾಚಾರ ಮಾನ್ಯತೆ ಗಳಿಸಿರುವುದು ನಾಚಿಕೆಗೇಡು ಮತ್ತು ದುರಾದೃಷ್ಟಕರ ಈ ಶಾಪ ಅಡೆತಡೆಯಿಲ್ಲದೆ, ಅಂಕೆಶಂಕೆಯಿಲ್ಲದೆ ಬಡ ಜನರ ಬಲಿ ತೆಗೆದುಕೊಳ್ಳುತ್ತಿದೆ. ಬೇಲಿ ಎದ್ದು ಹೊಲ ಮೇಯುತ್ತಿರು

ವಾಗ, ಭ್ರಷ್ಟಾಚಾರ ಹತ್ತಿಕ್ಕುವ ಪ್ರಯತ್ನಗಳೆಲ್ಲ ರಾಜಕೀಯ ನಾಟಕ. ಚುನಾವಣೆ ಪದ್ಧತಿಗಳು, ಭ್ರಷ್ಟತೆಗಳನ್ನು ಬಲಗೊಳಿಸುತ್ತಿವೆ. ಪ್ರತಿ ಪಕ್ಷವೂ ಹಣ ವಸೂಲಿಯಲ್ಲಿ, ಖರ್ಚಿನಲ್ಲಿ ಪೈಪೋಟಿ ನಡೆಸುತ್ತಿವೆ.

ಪಂಡಿತ ಜವಾಹರಲಾಲ್ ಅವರ ಕಾಲದಲ್ಲಿ ಚುನಾವಣೆಗೆ ಖರ್ಚು ಬಹಳ ಕಡಿಮೆ ಇತ್ತು. ನೀತಿ ನಿಯಮಗಳ ರೀತ್ಯ ಚುನಾವಣೆ ನಡೆಯುತ್ತಿತ್ತು. ಇಂದಿರಾಗಾಂಧಿಯವರ ಅವಧಿಯಲ್ಲಿ ಹಣದ ಅರ್ಭಟ ಅಬ್ಬರದಿಂದಲೇ ಚುನಾವಣೆ ಸಂಜಯಗಾಂಧಿ ಅವರ ದರ್ಭಾರಿನಿಂದ, ಪ್ರಧಾನಿ ಗೃಹವೇ ದಳ್ಳಾಳಿಗಳ ಸಂತೆ ಆಗಿತ್ತು. ರಾಜೀವಗಾಂಧಿ ಅವರು, ಪರದೇಶದ ಸರಬ ರಾಜಿಗೆ ದಳ್ಳಾಳಿ ರುಸಂ ಸಿಲ್ಲಿಸಿ, ಅದನ್ನು ಪಡೆಯುವ ಏರ್ಪಾಡಾಗಿ ಭೋಫೋರ್ಸ್ ಅಂಥ ಲೋಕಾಪವಾದಕ್ಕೆ ಸಿಕ್ಕಿಬಿದ್ದರು. ಮುರಾರ್ಜಿ, ವಿ ಪಿ ಸಿಂಗ್ ಮತ್ತು ಚಂದ್ರಶೇಖರ್‌ರವರ ಕಾಲಗಳಲ್ಲಿ, ಮಂತ್ರಿಗಳು ವಸೂಲಿಯಲ್ಲಿ ನಿರತರಾದರು

ಇಂದಿನ ಹೊಲಸು ರಾಜಕೀಯದಿಂದ ಅಧಿಕಾರ, ಹಣ ಇದ್ದವರಿಗೆ ಮಾತ್ರ ಮಾನ್ಯತೆ, ಅವುಗಳಿಲ್ಲದವರು ಹೆಣದ ಸಮಾನ. ಹಣ ಪರಮ ಪ್ರಧಾನ. ವಿಶಿಷ್ಟರನ್ನು ವಿಕ್ರಯಿಸುವ ವೀರ್ಯ, ವಿತ್ತಕ್ಕಿದೆ. ಬಹು ಪಕ್ಷ ಗಳ ಪದ್ಧತಿ, ಕೊಳ್ಳೆಕಾಸಿನ, ಕೈವಾಡವನ್ನು ಗಗನಕ್ಕೇರಿಸಿದೆ. ಆಸನಕ್ಕೆ ಅಂಟಿಕೊಳ್ಳುವ ಹುಚ್ಚಿನಿಂದ, ಆಗ್ರೇಸರಅಂತಸ್ತುಗಳು ಅಧೋಗತಿ ಯಾಗಿದೆ. ಸಂತ ಲಾಲ್‌ಬಹದ್ದೂರುಶಾಸ್ತ್ರಿ. ಅವರು ಒಂದು ರೈಲ್ವೆ ದುರಂತಕ್ಕೆ ಜವಾಬ್ದಾರಿ ಹೊತ್ತು, ಒಂದೇ ಕ್ಷಣದಲ್ಲಿ ಮಂತ್ರಿಪದವಿಗೆ ರಾಜೀನಾಮೆ ಕೊಟ್ಟು ಬಹದ್ದೂರ್ ಆದರು. ಮಾನಮರ್ಯಾದೆ ಇಲ್ಲವೆ ಮಾನ್ಯತೆ ಇಲ್ಲ ವರ್ಚಸ್ಸು ಇಲ್ಲದವರು ಎಷ್ಟೇ ಶ್ರೇಷ್ಠ ಶ್ರೇಣಿಯಲ್ಲಿರಲಿ ದಕ್ಷ ಆಡಳಿತ ಕೊಡಲು ಅಸಾಧ್ಯ. ನಮ್ಮ ದೋಷ ದೌರ್ಬಲ್ಯಗಳಿಂದ ಅಮೇರಿಕ ದಂಥ ದೇಶಗಳು, ನಮ್ಮನ್ನು ತೃಣೀಕರಿಸಿದ್ದಾರೆ ಕಾಶ್ಮೀರ ದಂಥ ಅಂತರ ವಿಷಯಗಳ ಬಗ್ಗೆ ತಲೆ ಹಾಕುತ್ತಿದ್ದಾರೆ. ರಷ್ಯದವರು ಇಂಜಿನ್ ಸರಬರಾಜಿಗೆ ಮಾಡಿಕೊಂಡಿದ್ದ ಒಪ್ಪಂದ ಮುರಿಯು ತ್ತಿದ್ದಾರೆ.

ಜಗತ್ತಿನಲ್ಲಿ ಎಲ್ಲೂ, ಅಲ್ಪ ಸಂಖ್ಯಾತರಿಗೆ, ಬಹು ಸಂಖ್ಯಾತರಿಗೆ, ಬೇರೆ ಬೇರೆ ವೈಯುಕ್ತಿಕ ಕಾನೂನು ಇಲ್ಲ. ಭಾರತೀಯ ಎಂದರೆ ಒಂದೇ ಸಮನಾದ ಹಕ್ಕು ಮತ್ತು ಜವಾಬ್ದಾರಿಗಳಿರಬೇಕು. ಯಾವುದರಲ್ಲೂ ತಾರತಮ್ಯ ಸಲ್ಲ. ಚೀನಾ, ರಷ್ಯಾ, ಮುಂತಾದ ರಾಷ್ಟ್ರಗಳಲ್ಲೂ ಮುಸ್ಲಿಮರು ಇದ್ದು, ಅವರೆಲ್ಲ ಒಂದೇ ಕಾನೂನಿನ ಅಡಿಯಲ್ಲಿ ಇದ್ದಾರೆ. ಸಂಸಾರ ಜೀವನದಲ್ಲಿ ಸುಖ ಶಾಂತಿ ಅನುಭವಿಸುತ್ತಿದ್ದಾರೆ. ಜಾತಿಮತ ವರ್ಗಗಳ ಶಾಪದಿಂದ ಕೂಡಿದ ರಾಷ್ಟ್ರ ಅಭ್ಯುದಯ ಹೊಂದುವುದು ಕಷ್ಟ. ಜಾತಿಮತ ವಾದ ಹಿಂದುಳಿದಿರುವವರ ಲಕ್ಷಣ. ಸ್ವಾತಂತ್ರ್ಯಕ್ಕೆ ಹೋರಾಡಿದಾಗ ಇದ್ದ ಸಹೋದರತ್ವ ಇಂದು ಮಾಯವಾಗಿದೆ. ರಾಜಕೀಯ ಪ್ರಭಾವ ಗಳಿಸುವ ಏಕೈಕ ದೃಷ್ಟಿಯಿಂದ, ಜಾತಿ, ಮತ, ಧರ್ಮಗಳನ್ನು ಕೆರಳಿಸುವುದು ಸಾಮಾನ್ಯವಾಗಿದೆ. ಕೋಮು ಮಿಶ್ರಿತ ರಾಜಕೀಯ ಮತ್ತು ಧರ್ಮಗಳ ಮೈತ್ರಿ, ರಾಷ್ಟ್ರವಿನಾಶ. ವ್ಯಕ್ತಿಗೆ, ಮಾನ್ಯತೆ, ಮರ್ಯಾದೆ, ಸಮಾನ ಅವಕಾಶ ಇದ್ದಾಗ ಮಾತ್ರ, ರಾಷ್ಟ್ರೋನ್ನತಿ ಸಾಧ್ಯ. ಅಲ್ಲದೆ ಪ್ರಪಂಚದ ಮಾನ್ಯತೆ ಸುಲಭ. ನೆರೆಹೊರೆಯ ರಾಷ್ಟ್ರಗಳ ಬಗ್ಗೆ ವಿಶಾಲ ಮನೋಭಾವ ಇರಬೇಕು ಅವರ ಸಂಕುಚಿತ ಭಾವನೆಗಳನ್ನು ನಮ್ಮ ದೊಡ್ಡತನದಿಂದ ಗೆಲ್ಲಬೇಕು.

ಆಲೋಚನೆ ತರ್ಕ ಮತ್ತು ಕಲ್ಪನಾಶಕ್ತಿಯಿಂದ ಮಾನವ ಪ್ರಪಂಚದ ಶಿಖರದಲ್ಲಿದ್ದಾನೆ ನಮ್ಮ ಕರ್ತವ್ಯಗಳೆಲ್ಲ ನಮ್ಮ ಯೋಚನೆಯ ಫಲ. ನಮ್ಮ ಆಲೋಚನೆಗಳನ್ನು ಪ್ರಚೋದಿಸುವ ಪ್ರಮುಖ ಅಂಗ, ಪತ್ರಿಕೆ, ಪ್ರಕಟನೆ, ಸಿನೆಮಾ, ಟಿ.ವಿ. ಮತ್ತು ಪುಸ್ತಕಗಳು. ಪ್ರಜಾಪ್ರಭುತ್ವದ ಉಳಿವಿಗೆ, ಸುದ್ದಿ ಮಾಧ್ಯಮಗಳ ಪಾತ್ರ ಬಹು ಮುಖ್ಯ. ಸ್ವಾತಂತ್ರ ಸಮರದ ದಿನಗಳಲ್ಲಿ ಪತ್ರಿಕೆಗಳು, ನೀಡಿದ ಸಹಕಾರ ಅತ್ಯದ್ಭುತ. ರಾಷ್ಟ್ರ. ಆ ಮಾಧ್ಯಮಕ್ಕೆ ಸರ್ವದಾ ಋಣಿಯಾಗಿರಬೇಕು

ಅನೇಕ ಮಾಧ್ಯಮಗಳು ಬಂಡವಾಳಗಾರರ ಸ್ವತ್ತಾಗಿವೆ. ಯಜಮಾನರ ಧ್ಯೇಯ, ಆಡಳಿತ ಪಕ್ಷದಿಂದ ಆದಷ್ಟು ಅನುಕೂಲತೆಗಳನ್ನು ಪಡೆದುಕೊಂಡು, ಸರ್ಕಾರದ ತಪ್ಪುಗಳ ಬಗ್ಗೆ ಕಣ್ಣುಮುಚ್ಚಿಕೊಳ್ಳುವುದು

ಸಾಮಾನ್ಯ. ಆದರೂ ಕೆಲವು ಪತ್ರಿಕೆಗಳು, ಸರ್ಕಾರದ ಆಗು ಹೋಗು ಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿ, ರಾಷ್ಟ್ರಕ್ಕೆ ಮಹದುಪಕಾರ ಎಸಗು ತ್ತಿದ್ದಾರೆ. ಉಚ್ಚಮಟ್ಟದ ಭ್ರಷ್ಟಾಚಾರಗಳನ್ನು ಅತಿ ಧೈರ್ಯದಿಂದ, ಕುಶಲತೆಯಿಂದ, ಪತ್ತೆ ಹಚ್ಚಿ, ಅಮೋಘವಾದ ರಾಷ್ಟ್ರ ಸೇವೆ ಸಲ್ಲಿಸುತ್ತಿ ದ್ದಾರೆ. ಅಂಥ ದೇಶ ಭಕ್ತರಿಗೆ ರಾಷ್ಟ್ರದ ಬಿರುದುಗಳು ಮುಡುಪಾಗಿರ ಬೇಕು. ಆದಕ್ಕೆ ಬದಲಾಗಿ, ಅನೇಕ ಪತ್ರಿಕೆಗಳು ಸರಕಾರದ ಅತಿ ಕುಟಿಲ ವಕ್ರ ದೃಷ್ಟಿಗೆ ತುತ್ತಾಗಿ, ಕಷ್ಟನಷ್ಟಗಳನ್ನು ಅನುಭವಿಸ ತ್ತಿವೆ. ಆದರೂ ನಿಜ ದೇಶಭಕ್ತರ ಆಶೀರ್ವಾದ ಅವರ ಮೇಲೆ ಸರ್ವದಾ ಇವೆ ಮುಂದು ವರಿದ ಪಾಶ್ಚಮಾತ್ಯ ರಾಷ್ಟ್ರಗಳ, ಪತ್ರಿಕೆಗಳು ತಮ್ಮ ಸಂಶೋಧನೆ ಯಿಂದ, ಅನೇಕ ದುಷ್ಟ ರಾಜಕಾರಣಿಗಳು, ತಮ್ಮ ಉಚ್ಚ ಪದವಿ ಗಳನ್ನೂ ಕಳೆದುಕೊಂಡಿರುವುದು, ಇತಿಹಾಸದ ವಿಷಯು ನಮ್ಮ ಮಾಧ್ಯಮದ, ನೌಕರರಿಗೆ ಪಾಶ್ಚಿಮಾತ್ಯ ಸಹೋದ್ಯೋಗಿಗಳನ್ನು ವಿಾರಿ ಸುವ ಪತ್ತೆದಾರಿ ಚತುರತೆ, ಪ್ರಾಮಾಣಿಕತೆ, ಧೈರ್ಯ ಅಪಾರವಾಗಿದೆ. ಆದರೆ ತಮ್ಮ ಅವಲಂಬನೆಯಿಂದ, ಅವರ ಅಘಾದ ಬುದ್ಧಿಮತ್ತೆಕೆ ಹೊರ ಬರುತ್ತಿಲ್ಲ. ರಾಷ್ಟ್ರ, ಪತ್ರಿಕಾ ಉದ್ಯಮದ ನೌಕರರ ನಿಸ್ವಾರ್ಥ ಸೇವೆ ಯನ್ನು ಕೈ ಬೀಸಿ ಕರೆಯುತ್ತಿದೆ.

ಸಿನೆಮಾ, ಟಿ ವಿ. ಮತ್ತು ಕೆಲವು ಪತ್ರಿಕೆಗಳು, ನಿರ್ಲಜ್ಜೆಯಿಂದ, ಮತ್ತು ನಿರ್ಲಕ್ಷತನದಿಂದ, ಪ್ರದರ್ಶಿಸುವ ಅಸಭ್ಯ ನಡವಳಿಕೆ, ಬೈಗುಳ, ಹೊಡೆ ದಾಟ, ಗುಂಡಿನೇಟು, ನಗ್ನತೆ, ಕಾಮುಕ ಪಿಕಾರ, ಜಶೋಟಿ ವಿಾರಿದ ಲೈಂಗಿಕ ಪ್ರಚೋದನೆ, ಕಳ್ಳತನ, ಖೂನಿ, ದರೋಡೆ ಮುಂತಾದ ದುರಾಚಾರದ ಪ್ರದರ್ಶನಗಳು ಜನಮನದ ಮೇಲೆ ಅಘಾದ ವಾದ ಪರಿಣಾಮಗಳನ್ನು ಬೀರುತ್ತಿವೆ. ನೈತಿಕಮಟ್ಟ ನೆಲಪಾಲಾಗಿದೆ. ಆದರೂ ಅಲ್ಲಲ್ಲಿ ಕೆಲವು ಸುಸಂಸ್ಕೃತ ನಟ ನಟಿಯರು, ಮತ್ತು ಕಲಾ ರು ತಮ್ಮ ಸೌಜನ್ಯ, ಉಚ್ಚಮಟ್ಟದ ಸಂಸ್ಕೃತಿಯಿಂದ ರಾಷ್ಟ್ರಕ್ಕೆ ಮಹ ದುಪಕಾರ ಮಾಡುತ್ತಿದ್ದಾರೆ.

ಕೇಂದ್ರೀಕೃತವಾದ ಆರ್ಥಿಕ ಯೋಜನೆ ನಿರೂಪಣೆಯೇ ರೋಗಗ್ರಸ್ತ ಆರ್ಥಿಕ ಪರಿಸ್ಥಿತಿಗೆ ಕಾರಣ. ಜನಸಾಮಾನ್ಯರ ತ್ವರಿತ ಅಭಿವೃದ್ಧಿಗಾಗಿ, ಕೇಂದ್ರೀಕರಣ ಅವಶ್ಯಕ, ಎಂಬ ವಾದ, ನಿಜವಾಗಿಲ್ಲ. ನಾಲ್ಕು ದಶಕಗಳು ದಾಟಿದರೂ, ಆ ಘನ ಧ್ಯೇಯ ಸಫಲವಾಗಿಲ್ಲ. ಕೇಂದ್ರೀಕೃತ ಆಡಳಿತ, ವರ್ಗದ, ಕೈವಾಡ ಹೆಚ್ಚಿಸಿ, ಭ್ರಷ್ಟಾಚಾರ ವ್ಯಾಪಕವಾಗಿದೆ. ದೆಹಲಿಯಿಂದ ಲಂಚದ ರೀತಿನೀತಿಗಳು ಸೃಷ್ಟಿಯಾಗುತ್ತಿವೆ. ಈಗ ಕೇಂದ್ರದಲ್ಲಿ ಭ್ರಷ್ಟಾಚಾರ ತುಂಬಿ ತುಳುಕುತ್ತಿದೆ. ಆದರಿಂದ, ಪ್ರಾಂತ್ಯಗಳಲ್ಲಿ ಪ್ರಾಮಾಣಿಕ ಸರ್ಕಾರ ಬರಲು ಸಾಧ್ಯವಾಗುತ್ತಿಲ್ಲ. ಕೇಂದ್ರೀಕೃತ ಯೋಜನೆಗಳೆಲ್ಲ ಪ್ರಜಾತಂತ್ರದ ಸ್ವಾತಂತ್ರ್ಯವನ್ನು ಮೊಟಕು ಮಾಡುತ್ತಿವೆ. ಸರ್ಕಾರ ಒಂದು ಆತ್ಮವಿಲ್ಲದ ಹಿಂಸಾಯಂತ್ರ, ಅದರ ಕೇಂದ್ರೀಕೃತದಿಂದ ಜೀವನ ಸಮಸ್ಯೆಗಳು ಉಲ್ಬಣಗೊಳ್ಳುತ್ತಿವೆ. ಗ್ರಾಮ ಸ್ವರಾಜ್ಯವೇ ಪ್ರಜಾ ಯೋಗಕ್ಷೇಮದ ಪ್ರಥಮ ಸೋಪಾನ. ಹಿಂದೆ ಇದ್ದದ್ದೆಲ್ಲ ಕೆಟ್ಟದ್ದು ಅನ್ನುವ ಭಾವ ಸರಿಯಲ್ಲ. ಹಳ್ಳಿಯಲ್ಲಿ ಸ್ವಾತಂತ್ರ್ಯಕ್ಕೆ ಮೊದಲೇ ನಿಜವಾದ ಪ್ರಜಾತಂತ್ರವಿತ್ತು. ಗ್ರಾಮ ಆಡಳಿತದವರಿಗೂ ಚೆನ್ನಾಗಿತ್ತು. ಕೋರ್ಟು ಕಚೇರಿಯ ಮೆಟ್ಟಲು ಹತ್ತುತ್ತಿದ್ದುದು ಬಹು ಕಡಿಮೆ ಇತ್ತು. ಅದು ಅವರ ಆತ್ಮಗೌರವಕ್ಕೆ ಕುಂದು ಎನ್ನುವ ಭಾವನೆ ಇತ್ತು. ಒಂದೇ ಒಂದು ಉದಾಹರಣೆ - ಪಟೇಲ, ಶಾನ್ಭೋಗ, ತೋಟಿ, ತಳವಾರ, ಅರ್ಚಕ ಇವರಿಗೆಲ್ಲಾ ಜಮೀನು ಕೊಟ್ಟು, ಅವರೆಲ್ಲ ದುಡಿದು ತಮ್ಮ ಜೀವನ ಸಾಗಿಸಿಕೊಂಡು ಜನಸೇವೆ ಮಾಡುತ್ತಿದ್ದರು. ಈಗ ಅವರ ಜಾಗಗಳಲ್ಲಿ ಸಂಬಳದ ನೌಕರರು ಬಂದು ಹಳ್ಳಿಯ ಜನರ ಬಾಳನ್ನೇ ಹಾಳು ಮಾಡುತ್ತಿದ್ದಾರೆ. ದಿನಕ್ಕೆ ಕನಿಷ್ಠ ಒಂದು ಸಾವಿರ ವರಮಾನವಿಲ್ಲದೆ, ಮನೆಗೆ ಹೋಗುವುದಿಲ್ಲ ಎಂದು ಶಪಥ ಮಾಡಿರುವ ಹಳ್ಳಿಯ ಅಧಿಕಾರಿಗಳು ಶಾಪವಾಗಿದ್ದಾರೆ. ಇಲ್ಲದ ಜಗಳಗಳನ್ನು ಹುಟ್ಟುಹಾಕಿ, ಅಶಾಂತಿ ತಾಣಗಳನ್ನಾಗಿ ಮಾಡಿದ್ದಾರೆ.

ಇಂದಿನ ರಾಜಕೀಯ ವ್ಯವಸ್ಥೆಯಲ್ಲಿ, ರಾಜ್ಯದ ಮುಖ್ಯಮಂತ್ರಿ, ಇತರೇ ಮಂತ್ರಿಗಳ ನೇಮಕ ಮತ್ತು ಪಕ್ಷದ ಧ್ಯೇಯ, ರಚನೆ ಉಳಿವು ಎಲ್ಲವೂ,

ಡೆಲ್ಲಿಯಿಂದಲೇ ಆಗಬೇಕು. ಇದು ಬರೀ ಕಾಂಗ್ರೆಸ್ ಸರ್ಕಾರದ ಬಾಳಲ್ಲ. ಪ್ರತಿಪಕ್ಷಕ್ಕೂ ಅಂಟಿರುವ ಪೀಡೆ. ಪ್ರಜಾತಂತ್ರಕ್ಕೆ ಇದು ದೊಡ್ಡ ಶಾಪ, ಅವಮಾನ, ಅವಹೇಳನ ಇದರಿಂದ ಪ್ರತಿನಿತ್ಯ ಮಂತ್ರಿಗಳ ಡೆಲ್ಲಿಯಾತ್ರೆ ತಪ್ಪಿದ್ದಲ್ಲ. ಒಬ್ಬ ಮಂತ್ರಿಯ ಡೆಲ್ಲಿಯಾತ್ರೆ ಖರ್ಚು ಕನಿಷ್ಠ ಒಂದು ಲಕ್ಷ ರೂಪಾಯಿ. ಅವರು ಸರ್ಕಾರದ ಸಂಬಳ ತೆಗೆದುಕೊಳ್ಳುತ್ತಿರುವುದು ಪ್ರಜೆಗಳ ಸೇವೆಗೆ. ಯಾರೂ ತಮ್ಮ ಆದ್ಯ ಕರ್ತವ್ಯಗಳ ಬಗ್ಗೆ ಗಮನ ಹರಿಸಲಾಗುತ್ತಿಲ್ಲ ಕೇಂದ್ರೀಕೃತ, ಪಕ್ಷಗಳ ಛಿದ್ರತೆಗೆ ಮೂಲ ಸ್ವಾರ್ಥತೆ ಯಿಂದ ಪ್ರಜಾತಂತ್ರದ ತತ್ವಗಳನ್ನು ಗಾಳಿಗೆ ತೂರಿ ಪ್ರಧಾನಿ ತಮಗೆ ಬೇಕಾದವರನ್ನು ಮುಖ್ಯಮಂತ್ರಿ ಪಟ್ಟಕ್ಕೇರಿಸಿದಾಗ ಬಹುಮತದ ಪಕ್ಷ ಒಡೆದು, ಹೋಳಾಗಿರುವುದನ್ನು ಇತಿಹಾಸ ಸ್ಪಷ್ಟಪಡಿಸುತ್ತಿದೆ. ಡೆಲ್ಲಿ ಯಿಂದ ನೇಮಿಸಿದ, ಮುಖ್ಯಮಂತ್ರಿ, ಕೂಡ, ಒಂದೇ ಸಮ ಮೂರು ತಿಂಗಳು, ಜನಗಳ ಸಮಸ್ಯೆಗಳ ಬಗ್ಗೆ ಗಮನ ಹರಿಸುವ ಮನ ಶ್ಯಾಂತಿ ಅಸಾಧ್ಯ. ಭಿನ್ನಮತೀಯರ, ಪ್ರತಿನಿತ್ಯದ ಡೆಲ್ಲಿ ಯಾತ್ರೆ ನಡೆಯುತ್ತಲೇ ಇರುತ್ತದೆ. ರಾಜ್ಯಸರ್ಕಾರದ ಅಭಿವೃದ್ಧಿ ಕಾರ್ಯಗಳು ಅಸಾಧ್ಯ. ಪ್ರತಿಪಕ್ಷ ಗಳ ಪ್ರೇರಣೆ, ಸಾಮಾನ್ಯ. ಜನಸಾಮಾನ್ಯನ ಹತಾಶೆ ತಪ್ಪಿದ್ದಲ್ಲ.

ಸ್ವಾತಂತ್ರ್ಯದ, ಪ್ರಜಾತಂತ್ರದ ಅರ್ಥವೇ ಇಲ್ಲವಾಗಿದೆ. ಪ್ರಜಾ ಪ್ರಧಾನ್ಯವಾದ ಪ್ರತ್ಯೇಕತೆಯಿಂದ ಹಾನಿಯಿಲ್ಲ. ಇದರಿಂದ ಒಗ್ಗಟ್ಟು ದಕ್ಷತೆ, ಅಭಿವೃದ್ಧಿ ಮತ್ತು ಸೌಹಾರ್ದತೆ ಹೆಚ್ಚುತ್ತದೆ. ಪ್ರಾಂತ್ಯ, ಸರ್ಕಾರ, ಪ್ರಜಾ ಆಧೀನವಾಗಬೇಕು. ಡೆಲ್ಲಿಯ ಒಬ್ಬ ವ್ಯಕ್ತಿಯ ಅಡಿ ಯಾಳು ಆಗಬಾರದು. ಪ್ರಾಂತ್ಯಗಳ ಆಡಳಿತ ಜನಗಳ ತೀರ್ಮಾನಕ್ಕೆ ತಕ್ಷಣ ಬಿಡಬೇಕು. ಒಂದೆರಡು ವರ್ಷ ಕಷ್ಟವಾಗಬಹುದು, ಗಲಿಬಿಲಿ ಯಾಗಬಹುದು, ಅದೇ ನಿಜ ಪ್ರಜಾತಂತ್ರ.

ಇಂದು ಪ್ರಾಂತೀಯ ಸರ್ಕಾರ, ಒಂದು ಪೌರಸಂಸ್ಥೆಯ ಅಂತಸ್ತು ಪಡೆ ದಿದೆ, ಬರುವ ಆದಾಯವೆಲ್ಲ ಕೇಂದ್ರದ ಆಡಳಿತಕ್ಕೆ ಸೇರಿ, ಪ್ರಾಂತ್ಯಗಳ ಅಭಿವೃದ್ಧಿ ಕಾರ್ಯಗಳನ್ನು ಸ್ವತಂತ್ರವಾಗಿ ನಡೆಸುವಂತೆ ಇಲ್ಲ

ಒಂದೊಂದು ಪ್ರಾಂತ್ಯದ ಅವಶ್ಯಕತೆಗಳು ಭಿನ್ನವಾಗಿವೆ. ಮುಂದುವರಿದ ದೊಡ್ಡ ಪ್ರಜಾಪ್ರಭುತ್ವಗಳಿಂದ, ಇಂಥ ಒಳ್ಳೆಯದನ್ನು ನಾವು ಕಲಿಯಲು ಮನಸ್ಸು ಮಾಡುತ್ತಿಲ್ಲ. ರಕ್ಷಣೆ, ವಿದೇಶ ವ್ಯವಹಾರ, ನಾಣ್ಯ ಚಲಾವಣೆಗಳಿಗೆ ಮಾತ್ರ ಕೇಂದ್ರ ಜವಾಬ್ದಾರಿ ವಹಿಸಿ, ಬಾಕಿ ಎಲ್ಲಾ ವಿಚಾರಗಳಲ್ಲೂ ರಾಜ್ಯಗಳು ಸಂಪೂರ್ಣ ಸ್ವತಂತ್ರವಾಗಿರಬೇಕು. ಎಲ್ಲಕ್ಕಿಂತ ಹೆಚ್ಚಾಗಿ, ಸಂಪೂರ್ಣ ಆರ್ಥಿಕ ಸ್ವಾತಂತ್ರ್ಯ ಬಹುಮುಖ್ಯ. ವಿಕೇಂದ್ರೀಕರಣ ಮತ್ತು ಅವರಾಷ್ಟ್ರೀಕರಣ ರಾಷ್ಟ್ರದ ಉಳಿವಿಗೆ ಅತ್ಯಾವಶ್ಯಕ.

ಸರ್ಕಾರಕ್ಕೆ ಕೇಂದ್ರವಾಗಲಿ, ರಾಜ್ಯವಾಗಲಿ ಸ್ವಚ್ಛ ಆಡಳಿತ ಕೊಡುವ ಪ್ರತಿಜ್ಞೆ. ಸಂಕಲ್ಪ ಬಹು ಪ್ರಮುಖ. ಸರ್ಕಾರ ವ್ಯಾಪಾರದ ಹವ್ಯಾಸ ತೊರೆಯಬೇಕು ವ್ಯಾಪಾರಗಳನ್ನು, ಸಾರ್ವಜನಿಕರು ಕೈಗೊಂಡು ಸರ್ಕಾರದ ಬೊಕ್ಕಸ ತುಂಬಿಸಬೇಕು ಇಂದು ರಾಷ್ಟ್ರೀಕರಣದಿಂದ ಆಗಿರುವ ಅನಾಹುತಗಳನ್ನು ನೋಡುತ್ತಿದ್ದೇವೆ. ಎಲ್ಲೆಲ್ಲಿ ಸಾಧ್ಯವೊ ಅಲ್ಲಲ್ಲಿ ದಕ್ಷತೆ ಇರುವ ಜನ ಅವುಗಳನ್ನು ನಡೆಸಲು ಬಿಡಬೇಕು. ಪರದೇಶಗಳಲ್ಲಿ ಅಂಚೆ, ಟೆಲಿಫೋನ್, ವಿದ್ಯುತ್, ನೀರು ಸರಬರಾಜು ಮುಂತಾದ ಅನೇಕ ಕೆಲಸಗಳನ್ನು ಖಾಸಗಿಯವರಿಗೆ ವಹಿಸಿ ದಕ್ಷತೆಯಿಂದ ನಡೆಸುವ ಏರ್ಪಾಡು ಇದೆ. ಕಂದಾಯ ವಸೂಲಿಯನ್ನೂ ಸಾರ್ವಜನಿಕರಿಗೆ ಒಪ್ಪಿಸುವುದು ಸುಕ್ಷೇಮ ಇಂದು ತೆರಿಗೆ ಪಾವತಿ ಮಾಡಬೇಕಾದವರೂ ಲಂಚಕೊಡಬೇಕು. ಅವರಾಷ್ಟ್ರೀಕರಣ, ವಿಕೇಂದ್ರೀಕರಣಗಳು, ವ್ಯಾಪಕವಾಗಿರುವ ಭ್ರಷ್ಟತೆಯನ್ನು ಹತೋಟಿಪಡಿಸುತ್ತವೆ.

ಒಂದು ರಾಷ್ಟ್ರ ನಾಗರೀಕತೆಯು ಮತ್ತು ಉಚ್ಚಸಂಸ್ಕೃತಿಯು ತಾಣವಾಗಬೇಕಾದರೆ ಪ್ರಾಮಾಣಿಕ, ನಿಷ್ಪಕ್ಷ, ದಕ್ಷತೆಯ ನ್ಯಾಯಾಂಗ, ಪೋಲೀಸು ಮತ್ತು ಇತರೆ ಅಧಿಕಾರವರ್ಗ ಅತ್ಯವಶ್ಯಕ. ಇಂದು, ಈ ಸಂಸ್ಥೆಗಳನ್ನು
ಪರೂ ಒಂದು ಉಪಾಯದಿಂದ ರಾಜಕಾರಣಿಗಳ ಅನುಗ್ರಹ
ಗುಗಳಲ್ಲಿ ಇರಿಸಿಕೊಳ್ಳುವ ಕುತಂತ್ರಗಳು ನಿರಂತರವಾಗಿವೆ.
ನೀಧಿಗಳು ಒಕ್ಕೊರಲಿನಿಂದ, ಈ ಸಂಸ್ಥೆಗಳ ಸ್ವಾತಂತ್ರ್ಯ.

ಉಪಯುಕ್ತತೆ ಮತ್ತು ಶುದ್ಧತೆಗಳನ್ನು ಪುನರ್ನಿರ್ಮಿಸಬೇಕು, ಅಕ್ಷರಸ್ಥ ಅಧಿಕಾರ ವರ್ಗವೆ ರಾಷ್ಟ್ರದ ಸ್ಥಂಭ. ಅವರೆಲ್ಲಾ ವಿದ್ಯಾವಂತರಾಗಬೇಕು. ಸುಸಂಸ್ಕೃತರಾಗಬೇಕು. ನಿಜ ಭಾರತೀಯರಾಗಬೇಕು. ರಾಷ್ಟ್ರೋನ್ನತಿಯ ಹೊರೆ ಸಂಪೂರ್ಣವಾಗಿ ಹೊರಬೇಕು. ಹಿರಿಯ ಅಧಿಕಾರಿಗಳಾದರೂ,ರಾಜಕೀಯಸ್ಥರ ಕುಣಿತಕ್ಕೆ ತಾಳ ಹಾಕುವುದನ್ನು ನಿಲ್ಲಿಸಿದರೆ, ಪರಿಸ್ಥಿತಿ ಬದಲಾಗಿ ರಾಜಕೀಯಸ್ಥರು ಹತೋಟಿಗೆ ಬರುವುದು ಸಾಧ್ಯ. ಎಂಥ ಹಿರಿಯ ರಾಜಕಾರಣಿಯಿಂದ ಬಂದ, ಕಾನೂನು ಬಾಹಿರವಾದ ಆಜ್ಞೆ, ಪಾಲನೆ ಮಾಡಬೇಕಾದ ಹಂಗಿಲ್ಲ. ಕಾನೂನಿಗೆ ಕಂಕಣಬದ್ಧರಾಗಿ ಕರ್ತವ್ಯಯೋಗಿಗಳಾಗಬೇಕು. ಮಾನವ ಶೀಲ ಮತ್ತು ಮುಲಾಜುಗಳಿಗೆ ಮಣೆಯಿಡಬೇಕು. ಆಡಳಿತ ರಂಗದಲ್ಲಿ ಅನೇಕ ವರ್ಗಗಳು ತಮ್ಮ ಪುರೋಭಿವೃದ್ಧಿಗೆ ಮತ್ತು ರಕ್ಷಣೆಗಾಗಿ ಸಂಘ ಸಂಸ್ಥೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಅವುಗಳ ಸೇವೆಯನ್ನು ಭ್ರಷ್ಟ ಅಶಿಸ್ತಿನ, ಅದಕ್ಷತೆಯ, ಆಡಳಿತ ಅಜ್ಞಾನದ, ರಾಜಕಾರಣಿಗಳ ಹತೋಟಿಗೆ, ಉಪಯೋಗಿಸಿದರೆ, ರಾಷ್ಟ್ರವೇ ಅಭಾರಿಯಾಗಿರುತ್ತದೆ

ಇಂದು ಸರ್ಕಾರ ಅಥವಾ ಆಡಳಿತ ವರ್ಗ ಎಂದರೆ, ಒಂದು ಜಿಗುಪ್ಸೆ ತರುವ ಶವವಾಗಿದೆ. ವಿಧಿ ಇಲ್ಲದೆ, ಅಪಾರ್ಥ ಕಾನೂನಿನ ಅನ್ವಯದ ಭಯದಿಂದ ಜನ ತಲೆ ಬಾಗುತ್ತಿದ್ದಾರೆ. ಆಡಳಿತದ ಅನೈತಿಕತೆ, ಅಭಿಲಾಷೆ, ಶೋಷಣೆ ಸ್ವಾರ್ಥತೆಯ, ಆಸ್ತಿ ಗಳಿಸುವ ಪೈಪೋಟಿಯಲ್ಲಿ ರಾಜಕಾರಣಿಗಳ ಹೃದಯ ಕಲ್ಲಾಗಿದೆ. ಆಡಳಿತ ಅನುಭವರಹಿತ, ಕಲ್ಪನಾಹೀನ, ಅಹಂಕಾರಿ, ಭಾವನಾರಹಿತರೂ, ಮಾನವ ಘಟನೆಗಳಿಗೆ, ಮಾನವೀಯ ಪ್ರತಿಕ್ರಿಯೆ ತೋರಲು ಅನರ್ಹರಾದ, ರಾಜಕಾರಣಿಗಳಿಂದ ಸ್ಥಿತಿ ಬದಲಾಗದು. ಅಧಿಕಾರಿಗಳ ಉಚ್ಚ ಶಿಕ್ಷಣ, ಉನ್ನತ ತರಬೇತಿ, ಆಡಳಿತ ಶಿಸ್ತು ಅವರನ್ನು ನಿಜಪೌರರನ್ನಾಗಿ, ಸಹಪೌರರ, ದಕ್ಷ-ಸಾಮರ್ಥ್ಯ ಸೇವಕರನ್ನಾಗಿ ಪರಿಷ್ಕರಿಸಬೇಕು. ಅವರ ಚುರುಕು ಬುದ್ಧಿ, ಸಹಾನುಭೂತಿ, ಮತ್ತು ಕಲ್ಪನೆಗಳ ಸಾಮರ್ಥ್ಯ, ಇಂದಿನ ರಾಜಕೀಯ ದುರವಸ್ಥೆಗಳನ್ನು ಬದಲಾಯಿಸಬೇಕು, ಕಲ್ಯಾಣರಾಜ್ಯದ ಕಲ್ಪನೆ ಗ್ರಹಿಸಿ

ಸುಮೀ ರಾಜ್ಯದ ಆಡಳಿತದ ಹೊಣೆ ಹೊರಬೇಕಾಗಿದೆ. ಹೊಸದೊಂದು ಸಂಕಲ್ಪಶಕ್ತಿ, ಹೊಸ ನಿರ್ಧಾರ, ಹೊಸ ನಿಷ್ಠೆ, ಕೈಗೂಡಿಸಿಕೊಳ್ಳಬೇಕಾದ ಪ್ರಮೇಯ ಉದ್ಭವಿಸಿದೆ. ಈ ನಾಡಿನಲ್ಲಿ ಹುಟ್ಟಿದ ಪ್ರತಿ ಮಗುವು ತನ್ನ ವರ್ಚಸ್ಸನ್ನು ವೃದ್ಧಿಪಡಿಸಿಕೊಳ್ಳುವ ಪೂರ್ಣ ಅವಕಾಶ ಕಲ್ಪಿಸುವ ಸುವರ್ಣ ವ್ಯವಸ್ಥೆ ಅವರ ಕೈಯಲ್ಲಿದೆ.

ತಾವು ಸರ್ಕಾರದಿಂದ ಪಡೆಯುವ ಸಂಬಳಕ್ಕಿಂತ, ನೂರುಪಟ್ಟು ಪ್ರತಿಫಲ ಹಿಂತಿರುಗಿಸಬೇಕು. ಪರದೇಶಗಳ ಸಾಲ ಸದುಪಯೋಗವಾಗಬೇಕಾದರೆ, ಅಧಿಕಾರಿಗಳ ಪ್ರಾಮಾಣಿಕತೆಯ ಮಟ್ಟ ಮೇಲೇರಬೇಕಾಗಿದೆ, ಸಮರ್ಥ ವ್ಯಾಪಾರಿಗಳಂತೆ, ಒಂದು ಕೋಟಿ ಬಂಡವಾಳದಿಂದ ಹತ್ತುಕೋಟಿ ಮೌಲ್ಯದ ಪ್ರತಿಫಲ ದೊರಕಿಸಿಕೊಳ್ಳಬೇಕಾದರೆ, ಅವರಲ್ಲಿ ಸುವ್ಯವಸ್ಥೆ ಯಲ್ಲಿರುವ ವಿವೇಚನೆ, ಪ್ರಾಮಾಣಿಕತನ, ದೇಶಭಕ್ತಿ, ಚತುರತೆ ವೈಜ್ಞಾನಿಕ ದಕ್ಷತೆ ಮತ್ತು ಶೀಲಪಟತ್ವ ಹೊರಹೊಮ್ಮಬೇಕಾಗಿದೆ. ಮಾನವ ಸ್ವಾತಂತ್ರ್ಯದ, ಹಾಗು ಘನತೆ, ಸಮಾನತೆಗಳ ಆಧಾರದ ಮೇಲೆ ಶಾಶ್ವತ ನಾಗರೀಕತೆ ಮತ್ತು ಸಂಸ್ಕೃತಿಗಳನ್ನು ಸೃಷ್ಟಿಸುವ ಮಹತ್ತರ ಜವಾಬ್ದಾರಿ, ಅವರ ಹೆಗಲ ಮೇಲಿದೆ. ಪ್ರಜಾಪ್ರಭುತ್ವದಲ್ಲಿ ರಾಜ ಕಾರಣಿಗಳಿಗೆ, ಆಡಳಿತ ಜವಾಬ್ದಾರಿ ಸಂಪೂರ್ಣ ಇದೆ. ಆದರೆ ಅಧಿಕಾರಿ ಗಳ, ಪ್ರಾಮಾಣಿಕ, ಮಾರ್ಗದರ್ಶನವಿಲ್ಲದೆ ಪರಿಸ್ಥಿತಿ ಬದಲಾಗದು. ನಿಜ ದೇಶಪ್ರೇಮಿಯಾದ ರಾಜಕಾರಣಿ, ಅಧಿಕಾರಿಗಳ ಪ್ರಾಮಾಣಿಕ ಮಾರ್ಗ ದರ್ಶನಕ್ಕೆ ಸಂತೋಷದಿಂದ, ಅಹಂಕಾರ ದೂರಮಾಡಿ, ಒಳಗಾಗಬೇಕು. ಕೈಲಾಗದವರ ಗೋಳಿನ ಶಾಪ, ಕಠಿಣ ಪರಿಣಾಮಕಾರಿ. ಉಪಕಾರ ಹೊಂದಿದ ಸ್ವಬಂಧುಗಳ ಕೃತಜ್ಞತೆ ಸರ್ವಸಾಮಾನ್ಯ ದುರಿತ ನಿವಾ ರಣೆ ಹೊಂದಿದ, ಆದರ, ಆನಂದ, ಉಪಕಾರಸ್ಮರಣೆ, ಪ್ರಾರ್ಥನೆ,ಸೇವಾ ಮನೋಭಾವದ ಅಧಿಕಾರಿಗಳ, ಸ್ಥಿರಶೇವಣಿ ಮತ್ತು ಜೀವವಿಮೆ. ದೇಶ ಸೇವೆಯೇ ಈಶ ಸ್ತೋತ್ರ, ಜನಾಸಕ್ತಿಯೇ ಜನಾರ್ಧನ ಆರಾಧನೆ. ಅನೇಕ ವರ್ಷಗಳ ನಿವೃತ್ತ ಅಧಿಕಾರಿಗಳ ಅನುಭವಕ್ಕೆ ಬಂದಿರುವ ಶಾಶ್ವತ ಸತ್ಯ, ಇದು. ಅಪರಿಮಿತ ಆಡಳಿತ ಅನುಭವ ಹೊಂದಿರುವ, ವಿಶ್ರಾಂತಿ

ವೇತನದಾರರ ಸೇವೆಯನ್ನು, ರಾಷ್ಟ್ರ, ಕೈಬೀಸಿ ಕರೆಯುತ್ತಿದೆ. ಪ್ರತಿಭಟಿಸದೆ, ನಿಷ್ಕ್ರಿಯರಾಗಿರುವುದು ರಾಷ್ಟ್ರದ್ರೋಹ. ಉಚ್ಚಸ್ಥಾನಗಳಲ್ಲಿರುವ ಭ್ರಷ್ಟತೆಯ ಬಗ್ಗೆ ಧೈರ್ಯವಾಗಿ ಸಂಬಂಧಪಟ್ಟವರಿಗೆ ಮತ್ತು ವೃತ್ತಪತ್ರಿಕೆಗಳಿಗೆ ಬರೆದು ನಿಮ್ಮ ಅಸಮಾಧಾನವನ್ನೂ ವ್ಯಕ್ತಪಡಿಸಿ, ಇದು ಸಾಮಾನ್ಯರಿಗೆ, ನಿಜವಾದ ಪ್ರಜಾಶಂತ್ರದ ಮೌಲ್ಯದ ಶಿಕ್ಷಣ ಮತ್ತು ಮಾರ್ಗದರ್ಶನ ವಾಗುತ್ತದೆ. ಆದರೆ, ರಾಜಕೀಯ ಕಲುಷಿತ ವಕ್ರ ಕಕ್ಷೆಯೊಳಗೋಗುವ ಆಕಾಂಕ್ಷೆಗೆ ಬಲಿಯಾಗಿ ನಿರ್ವೀರ್ಯರಾಗಬೇಡಿ. ನಿಶ್ಚಿತವಾದ ನಿತ್ಯ ನಿವೃತ್ತಿಯ ಕಾಲ ಅನಿಶ್ಚಿತ. ಇಂದೊ ನಾಳೆಯೊ ! ಅದರೊಳಗಾಗಿ ಮಾತೃಭೂಮಿಯ ಋಣ ಕಿಂಚಿತ್ತಾದರೂ ಹರಿಸೋಣ.

## ಗ್ರಾಮನಿವಾಸಿಗಳು ಮತ್ತು ಕಾರ್ಮಿಕರು

ಬಹು ಮುಖ್ಯವಾಗಿ, ಮಹಾತ್ಮಗಾಂಧಿಯವರು, ಶೇಕಡ 85 ರಷ್ಟಿರುವ ಳಿಹ್ಳಿಗರ, ಕಾರ್ಮಿಕರ, ಅಭಿವೃದ್ಧಿಗೆ, ಸರ್ವಪ್ರಯತ್ನನಡೆಸಿದರು. ಸ್ವಾತಂತ್ರ್ಯ ನಂತರ ಅನೇಕ ಒಳ್ಳೆ ಕಾರ್ಯಗಳು ಸಾಗಿದ್ದರೂ, ಅವುಗಳೆಲ್ಲ ಭ್ರಷ್ಟತೆಯಿಂದ ಕಲುಷಿತವಾಗಿ, ಖರ್ಚಾದ ಹಣದಲ್ಲಿ ಕಾಲುಭಾಗ ಮಾತ್ರ ಉಪಯೋಗವಾಗಿದೆ. ಮುಕ್ಕಾಲುಪಾಲು ಹಣ, ಪ್ರಜಾಪ್ರತಿನಿಧಿಗಳ, ಅಧಕ್ಷತೆಯಿಂದ, ಅಪ್ರಮಾಣಿಕತೆಯಿಂದ, ಪೋಲಾಗಿದೆ. ನಲವತ್ತೇಳು ಸಂವತ್ಸರ ಕಳೆದರೂ ಅರ್ಧಜನ ದಟ್ಟದರಿದ್ರದಲ್ಲೇ ತೊಳಲುತ್ತಿದ್ದಾರೆ. ಇದಕ್ಕೆ ಪ್ರಮುಖ ಕಾರಣ, ನಾವೆಲ್ಲ ಮೂಗರಾಗಿದ್ದೇವೆ. ನಮ್ಮ ಏಳ್ಗೆಗೆ ನಾವೇ ಜವಾಬ್ದಾರರು. ಅದನ್ನು ಗಳಿಸಲು ಅಹಿಂಸಾ ಮಾರ್ಗದಲ್ಲಿ ಹೋರಾಟ ನಡಿಸಬೇಕು. ಮೇಟಿವಿದ್ಯೆಯ ಪ್ರತಿಫಲ ಅನಿಶ್ಚಿತವಾದರೂ, ಅನೇಕ ಕಾಟ, ಕಷ್ಟಕಾರ್ಪಣ್ಯಗಳ ಬಲೆಯಾದರೂ, ಅದು ಅಶವೃತವಾದುದ್ದು, ಅದ್ಭುತವಾದದು ಮತ್ತು ವಿಶಿಷ್ಟವಾದುದು ರೈತರ ಆಹುತಿ, ಭರವಸೆ, ತಾಳ್ಮೆ, ದೃಢತೆ ಮತ್ತು ನಿರಂತರವಾದ ಪ್ರಯತ್ನ ಅಮೋಘವಾದುದು ಪ್ರಕೃತಿ, ಈ ಶ್ರೇಷ್ಠ ಸುಗುಣಗಳನ್ನೂ ಅವರಲ್ಲಿ ಹುಟ್ಟುಹಾಕದಿದ್ದಿದ್ದರೆ, ಜೀವಕೋಟಿಯ ಅವಸ್ಥೆ ಬಹು ಸಂಕಟಕರವಾಗಿರುತ್ತಿತು. ಅವರನ್ನು ಅಜ್ಞಾನ, ವಿದ್ಯಾವಿಹೀನತ್ವ ಮತ್ತು

ದಾರಿದ್ರ್ಯದಲ್ಲಿ, ಮುಂದುವರಿಸುತ್ತಿರುವುದು ರಾಷ್ಟ್ರದುರಂತ. ಅದೇ ಪಟ್ಟಣಿಗ, ಏನೇ ಕಸಬು ಮಾಡಲಿ, ಅವನ ಭೋಗಗಳಿಗೆ ಕೊನೆಯಿಲ್ಲ. ಅವನ ಅರ್ಜನೆ ಅಭಯವಾದುದು. ಅಂದ ಚಂದ ಆಕರ್ಷಿತ, ಹೊಳಪಿನ ಹೊದಿಕೆಗಳಲ್ಲಿ, ನಿರ್ಜೀವ, ಜೀವಧಾರವಲ್ಲದ ಮತ್ತು ನಿಷ್ಪ್ರಯೋಜಕ ಭೋಗವಸ್ತುಗಳನ್ನು ಮುಚ್ಚಿ, ಒಂದಕ್ಕೆ, ನೂರರಷ್ಟು ಖಚಿತ ಲಾಭ ಸಂಪಾದನೆ ಹೊಂದುತ್ತಿದ್ದಾನೆ. ಅಂಥ ಭೋಗಾಧಿಪತಿಗಳಾದ ಪಟ್ಟಣಿಗರು ತಮ್ಮ ಅನ್ನಧಾತನ ಮೇಲೆ ಅಂತಃಕರಣ ಇಡಬೇಕು. ನಗರ ಕಾರ್ಮಿಕರು ತಮ್ಮ ಸಹೋದರರಿಗೆ ನ್ಯಾಯದೊರಕಿಸಲು ನೆರವಾಗಬೇಕು ಹಳ್ಳಿಗರು ನ್ಯಾಯ ಹಕ್ಕುಗಳಿಗಾಗಿ ಹೋರಾಡಿದರೆ, ಸರ್ವಸಹಾಯ ಒದಗುತ್ತದೆ ಮಗು ಅಳದೆ ಹಾಲು ದೊರೆಯುದು. ಬೆಳೆದ ಬೆಳೆಗೆ ನಿಶ್ಚಿತ ಮತ್ತು ನ್ಯಾಯವಾದಬೆಲೆ ಸ್ಥಳದಲ್ಲೆ ಕೊಟ್ಟು, ಕೊಂಡೋಗುವ ವ್ಯವಸ್ಥೆ ಮಾಡುವುದು ಸರ್ಕಾರದ ಜವಾಬ್ದಾರಿ. ಗ್ರಾಮಗಳಿಗೆ ಡಾಂಬರು ರಸ್ತೆ, ದೂರವಾಣಿ, ನಿರಂತರದ ನೀರು ಮತ್ತು ವಿದ್ಯುಚ್ಛಕ್ತಿಯ ಸರಬರಾಜು, ಅಲ್ಲದೆ, ಆರೋಗ್ಯ, ವಿದ್ಯಾಭ್ಯಾಸ, ವೃತ್ತಿಶಿಕ್ಷಣ ಮುಂತಾದ ಪ್ರಾಥಮಿಕ ಸೌಕರ್ಯಗಳನ್ನು ಗಳಿಸಿಕೊಳ್ಳುವುದು ಅವರ ಆಜನ್ಮ ಹಕ್ಕು ಇದಕ್ಕಾಗಿ ಸತ್ಯಾಗ್ರಹ ನಡಿಸಬೇಕು. ಎಂದರೆ, ಜಗಳವಲ್ಲ ಗುದ್ದಾಟವಲ್ಲ ಬೈದಾಟವಲ್ಲ, ವೈರತ್ವವಲ್ಲ. ಪ್ರೀತಿವಿಶ್ವಾಸಗಳಿಂದ, ಅಹಿಂಸಾ ಮಾರ್ಗದಿಂದ ಹಕ್ಕು ಸಾದಿಸುವುದು ಸರ್ವಸಮ್ಮತವಾದುದು. ಇನ್ನೂ ಕೂಡ ನಾವೆಲ್ಲ, ಆಡಳಿತವರ್ಗದ ಆಡಿಯಾಳಾಗಿದ್ದೇವೆ. ಲಂಚ ಕೊಡದೆ, ನಮ್ಮ ಯಾವ ಕೆಲಸವೂ ನಡೆಯುತ್ತಿಲ್ಲ. ಪ್ರಾಮಾಣಿಕ ಅಧಿಕಾರಿಗಳಿಗೆ ಗೌರವ ಸಲ್ಲಿಸಿ, ಅಪ್ರಮಾಣಿಕರಿಗೆ, ಮಣಿಯದೆ, ಲಂಚಕೊಡದೆ ನಿಮ್ಮ ಕೆಲಸಗಳನ್ನೂ ಮಾಡಿಕೊಡುವಂತೆ, ಒಗ್ಗಟ್ಟಾಗಿ ಹೋರಾಟ ನಡಿಸಿ. ಈ ದೆಸೆಯಲ್ಲಿ ಹಳ್ಳಿಯ ವಿದ್ಯಾವಂತ ಯುವಕರ ಪಾತ್ರ ಅಪಾರ. ಗಾಂಧಿ ಸಂಸ್ಕೃತಿ ರೂಢೈಸಿಕ್ಕೊಂಡು ಅನ್ಯಾಯ, ಅಪ್ರಮಾಣಿಕತೆ ಮಾಡುವವರನ್ನೆಲ್ಲ ಎದುರಿಸಿ, ಬುದ್ಧಿಕಲಿಸಿ, ಅಹಿಂಸಾಮಾರ್ಗದಲ್ಲಿ ಅವರಿಗೆ ಸೂಕ್ತ ಎಚ್ಚರಿಕೆ ಕೊಡಿ. ಚುನಾವಣೆಗಳಲ್ಲಿ ಯೋಗ್ಯ ಅಭ್ಯರ್ಥಿ, ಯಾವ ಪಕ್ಷದವನಾಗಲಿ ಅವನನ್ನೇ ಚುನಾಯಿಸಲು ಸರ್ವಪ್ರಯತ್ನ ಮಾಡಿ. ನಿಮ್ಮ ಮತ, ಧರ್ಮ

ದಿಂದ ವಿತರಿಸಬೇಕಾದ, ಮನೆ ದೇವರ ಮುಡುಪು. ಅದರ ವಿಕ್ರಯ ವಿನಾಶಕಾರಿ, ವಂಶ ನಾಶಿನಿ. ಪಕ್ಷಭೇಧ ಬಿಟ್ಟು ಪ್ರಾಮಾಣಿಕರನ್ನು ಗುರ್ತಿಸಿ. ದುಡಿಮೆಯ ಧೀರೋಧಾತ್ತರು, ಧೀಮಂತರಾದರೆ ದೇಶವೃದ್ಧಿ, ಧರ್ಮರಕ್ಷೆ, ಕಟ್ಟಿಟ್ಟಬುತ್ತಿ. ಎಲ್ಲಾ ರೀತಿಯಲ್ಲೂ ನಮ್ಮ ನಡವಳಿಕೆ ಗಳನ್ನು ನಿರಂತರ ಉತ್ತಮ ಪಡಿಸಿಕೊಳ್ಳುತ್ತಿರಬೇಕು. ನಮ್ಮ ಹಿರಿಯರ ಆದರ್ಶಗಳನ್ನು ಪಾಲಿಸಬೇಕು. ಹೆಚ್ಚಿನ ಉತ್ಸಾಹದಿಂದ, ಕಷ್ಟಪಟ್ಟು ನಮ್ಮ ಕರ್ತವ್ಯಗಳನ್ನು ಕೈಗೂಡಿಸಿಕೊಳ್ಳಬೇಕು. ನಮ್ಮಲ್ಲಿರುವ ಒಳ ಜಗಳಗಳನ್ನೂ ಮರೆತು ಹಳ್ಳಿಯ ಒಗ್ಗಟ್ಟನ್ನು ಕಾಪಾಡಬೇಕು ರಾಜ ಕೀಯಸ್ಥರು, ನಿಮ್ಮನ್ನು ಒಂದಾಗಲು ಬಿಡರು, ಎಚ್ಚರ ವಾಗಿರಿ. ಇಂದು ಜ್ಞಾನಾರ್ಜನೆಗೆ ಅನೇಕ ಅವಕಾಶಗಳಿವೆ. ಬುದ್ಧಿವಂತರಾಗಿ, ಕಷ್ಟಸಹಿಷ್ಣುಗಳಾಗಿ, ವಿವೇಕಿಗಳಾಗಿ, ದೇಶಹಿತ ಕಾಪಾಡಿ. ನೀವೆಲ್ಲ ಭಾರತೀಯರು ಎಂಬ ಅಂಶ ನಿಮ್ಮನ್ನು ಕೈಹಿಡಿದು ನಡಿಸಲಿ.

## ಸ್ತ್ರೀಯರು

ಭಾರತದಲ್ಲಿ ಸ್ತ್ರೀಯರ ಬಗ್ಗೆ ಇರುವ ಮಾತೃ ಎಂಬ ಆದರ್ಶ ಬಹು ವಿಶಿಷ್ಟವಾದದು. ತಾಯಿ ಸಂಸಾರದ ರಾಣಿ. ಪ್ರೇರಣಾಶಕ್ತಿಯುಕ್ಕೊಂಡಿ. ಮಾತೃ ನಿಸ್ವಾರ್ಥ ಪ್ರೇಮದ, ಕಷ್ಟಸಹಿಷ್ಣತೆಯ, ತಾಳ್ಮೆಯ ಮತ್ತು ಕ್ಷಮಾಗುಣಗಳ ಮೂರ್ತಿ. ಸ್ವಾತಂತ್ರ ಸಮರದಲ್ಲಿ ಸ್ತ್ರೀಯರ ಪಾತ್ರ, ಪುರುಷರಷ್ಟೆ ಪ್ರಮುಖವಾಗಿತ್ತು. ಅವರ ಸಹಕಾರ, ಪ್ರೇರಣೆ, ಸಹಾಯ ಇಲ್ಲದೆ ಇದ್ದಿದ್ದರೆ, ನಾವು ಇನ್ನೂ ಗುಲಾಮರಾಗಿ ಮುಂದುವರಿಯು ತ್ತಿದ್ದೆವು. ಸ್ವಾತಂತ್ರ ನಂತರ, ಭಾರತದ ಆಡಳಿತದಲ್ಲಿ ಸ್ತ್ರೀಯರು, ಅನೇಕ ಪಾತ್ರಗಳನ್ನು ನಿರ್ವಹಿಸಿದ್ದಾರೆ. ಪುರುಷರಿಗಿಂತ ಅವರು ಪ್ರಾಮಾಣಿಕರು, ದಕ್ಷರು. ಕೈಕೆಸರುಮಾಡಿಕೊಂಡಿರುವವರ ಸಂಖ್ಯೆ ಅತಿ ವಿರಳ. ಸ್ವಾತಂತ್ರದ ಉಳುವಿಗೆ, ಇಂದಿನ ಭ್ರಷ್ಟತೆಯನ್ನು ಹತೋಟಿಗೆ ತರಲು ಅವರ ಸಹಾಯ ಸಹಕಾರ ವಿಲ್ಲದೆ ಅಸಾಧ್ಯ.

ಚುನಾವಣೆಗಳಲ್ಲಿ ಯೋಗ್ಯ ಅಭ್ಯರ್ಥಿಗೇನೆ ಓಟುಕೊಡುವುದು, ಅನೈತಿಕ

ವ್ಯವಹಾರಗಳಿಗೆ ದಾರಿ ಇಲ್ಲದಂತೆ ನೋಡಿಕೊಳ್ಳುವುದು ಸ್ತ್ರೀಯರ ಕರ್ತವ್ಯ. ವಿದ್ಯಾವಂತ ಮಹಿಳೆಯರು, ತಮ್ಮ ಸಂಘ ಸಂಸ್ಥೆಗಳ ಮೂಲಕ ರಾಷ್ಟ್ರದ ಆಗು ಹೋಗುಗಳ ಬಗ್ಗೆ, ಬಹು ಮುಖ್ಯವಾಗಿ ಉಚ್ಛ ಸ್ಥಾನದಲ್ಲಿರುವ ಭ್ರಷ್ಟತೆಯನ್ನು ತೊಡೆದುಹಾಕಲು ಸರ್ವಪ್ರಯತ್ನ ಮಾಡಬೇಕಾದ ಜರೂರು ಸನ್ನಿವೇಶ ಬಂದಿದೆ. ಅನ್ಯಾಯ, ಅಪರಾಧ, ದೇಶದ್ರೋಹ,ಅ ಪ್ರಮಾಣಿಕತೆ, ಅಧಕ್ಷತೆ ಯಾರೇ ಮಾಡಲಿ ನಿರ್ದಾಕ್ಷಣ್ಯ ವಾಗಿ ಖಂಡಿಸಿ. ರಾಷ್ಟ್ರದ ಉಳಿವಿಗೆ ಸ್ತ್ರೀಯರ ಸಹಾಯ ತಕ್ಷಣ ಬೇಕಾ ಗಿದೆ. ಅಧೋಗತಿಯಾಗಿರುವ ನೈತಿಕ ಮಟ್ಟವನ್ನು ಪುನರ್-ಸ್ಥಾಪಿಸಲು ಸ್ತ್ರೀಯರಿಂದಲೇ ಸಾಧ್ಯ. ಹೇಡಿ, ಭಯಗ್ರಸ್ತ ಮತ್ತು ವಿಕಲ್ಪ ಅಸ್ವ ಸ್ಥರ, ಬದಲಿಗೆ ನಿರ್ಭಯ ಮತ್ತು ವಿವೇಚನೆಯ ವೀರರನ್ನು ಸೃಷ್ಟಿಸುವ ಮಹತ್ ಜವಾಬ್ದಾರಿ ಮಾತೆಯರ ಮೇಲಿದೆ.

## ಯುವಕರು

ಯೌವನಸ್ಥರು ರಾಷ್ಟ್ರದ ತಿರುಳು, ಭಂಡಾರ. ನಾಡಿನ ಭವಿಷ್ಯ ಅವರ ತರಬೇತಿ, ಅಡ್ಡ-ಆತಂಕಗಳಿಲ್ಲದ ಶಿಷ್ಯವೃತ್ತಿ, ಶಿಷ್ಟಾಚಾರ ಮತ್ತು ಶಿಸ್ತುಗಳನ್ನು ಅವಲಂಬಿಸಿದೆ. ಸ್ವಾರ್ಥ ರಾಜಕಾರಣಿಗಳ ಕುತಂತ್ರಕ್ಕೆ ಬಲಿಯಾಗದೆ, ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳುವುದು ಕಷ್ಟ ವಾದರೂ, ಅನಿವಾರ್ಯ. ರಾಜ್ಯಶಾಸ್ತ್ರ ಅಭ್ಯಾಸ ಮಾಡಿ, ರಾಜ್ಯ ನೀತಜ್ಞರಾಗಬೇಕು. ಬುದ್ಧಿವಂತನೂ, ದೂರದೃಷ್ಟಿಯುಳ್ಳವರೂ, ಕಾರ್ಯ ಶೀಲರೂ ಆಗಬೇಕು. ತುಚ್ಛ ರಾಜಕೀಯ ಪ್ರದರ್ಶನಗಳಿಂದ ದೂರ ವಿದ್ದು, ತಮ್ಮ ಶಕ್ತಿ ಸಾಮರ್ಥ್ಯಗಳನ್ನೆಲ್ಲಾ ಕೇಂದ್ರೀಕರಿಸಿ, ಆರ್ಥಿಕ ಸಾಮಾಜಿಕ, ನೈತಿಕ ಮತ್ತು ಆಧ್ಯಾತ್ಮಿಕ ವಿಚಾರಗಳಲ್ಲಿ ಪಾಂಡಿತ ಪಡೆಯಬೇಕು. ಮನುಷ್ಯರನ್ನು ಮನುಷ್ಯರಂತೆ ಕಂಡುಕೊಳ್ಳುವ. ನೆರೆಹೊರೆಯವರಲ್ಲಿ ಬಂಧುತ್ವದ ಭಾವನೆ ಬಲಪಡಿಸಿಕೊಳ್ಳುವ ಶೀಲ ವರ್ಧನೆಯ ವಿದ್ಯೆಯಲ್ಲಿ ನಿಪುಣರಾಗಬೇಕು ಸ್ವಾಮಿ ವಿವೇಕಾನಂದ ಮತ್ತು ಪಂಡಿತ ಜವಹರಲಾಲರು ಮುಂತಾದ ಶ್ರೇಷ್ಠರಂತೆ, ವಿಶ್ವ ವಿಖ್ಯಾತಿ, ವಿಶ್ವಪ್ರೇಮಿಗಳಾಗುವುದು ಪ್ರತಿ ತರುಣರ ಆಜನ್ಮ ಹಕ್ಕು

ನಿಮ್ಮ ಪ್ರಗತಿ ನಿಮ್ಮ ಕೈಲಿದೆ ಸುವರ್ಣ ಅವಕಾಶಗಳನ್ನು ಹಾಳುಮಾಡಿ ಕೊಂಡರೆ, ರಾಷ್ಟ್ರದ ಅಭ್ಯುದಯ ಅಸಾಧ್ಯ.

## ವಕೀಲರು

ರಾಷ್ಟ್ರದ ಸಂಕೋಲೆ ಕಿತ್ತೆಸೆಯಲು ವಕೀಲರ ಪಾತ್ರ, ವಿಶಿಷ್ಟವಾದುದು ಮತ್ತು ಅದ್ಭುತವಾದುದು. ಸಂವಿಧಾನ ರಚನೆಯಲ್ಲಿ ಅವರು ಪ್ರದರ್ಶಿಸಿರುವ ಪಾಂಡಿತ್ಯ, ಪರ್ಯಾಲೋಚನೆ ಮತ್ತು ಪರಿಣತಿ ಪರಿಪೂರ್ಣವಾದವುಗಳು. ರಾಷ್ಟ್ರಪ್ರೇಮ ಮತ್ತು ಪ್ರಜ್ಞಾಶೀಲತ್ವದಲ್ಲಿ ಅವರು ಯಾರಿಗೂ ಕಡಿಮೆಯಿಲ್ಲ ಕೋಟಿ ಕೋಟಿ ಜನಗಳ ಆಹುತಿಯಿಂದ ದೊರಕಿರುವ ಸ್ವಾತಂತ್ರ್ಯ ತತ್ತರಿಸುತ್ತಿದೆ, ತೂರಾಡುತ್ತಿದೆ. ಮಸ್ತಕದಿಂದ ಪಾದದವರೆವಿಗೂ ಆವರಿಸಿರುವ ಭ್ರಷ್ಟತೆ, ದಿಗ್ಭ್ರಮೆಗೊಳಿಸುತ್ತಿದೆ ರಾಜಕಾರಣಿಗಳ ಧನಮದ, ಧೂರ್ತತನಗಳಿಂದ ರಾಷ್ಟ್ರವೇ ಧಗಧಗಿಸುತ್ತಿದೆ. ಧರ್ಮ ಧ್ವಂಸವಾಗಿ ಜನಸಾಮಾನ್ಯರು ಧೃತಿಗೆಟ್ಟು ನರಳುತ್ತಿದ್ದಾರೆ. ನ್ಯಾಯವಾದಿಗಳ ನಾಯಕತ್ವ, ಆಹುತಿ, ಧೈರ್ಯ, ಸಾಹಸ ಮತ್ತೊಮ್ಮೆ ರಾಷ್ಟ್ರಕ್ಕೆ ಧಾರೆ ಎರೆಯಬೇಕಾದ ಗಂಭೀರ ಪ್ರಮೇಯ ಬಂದೊದಗಿದೆ ಒಂದೊಂದು ಘಳಿಗೆಯ ಆಲಸ್ಯ ರಾಷ್ಟ್ರಕ್ಕೆ ಆಘಾತ. ಪಶ್ಚಾತ್ತಾಪ ಪಡುವ ದುರಂತವನ್ನು ತಪ್ಪಿಸಿ, ಉಚ್ಚಸ್ಥಾನದಲ್ಲಿರುವವರ ಅಪ್ರಮಾಣಿಕತೆ ಮತ್ತು ಅಧಕ್ಷತೆಯನ್ನು ಬಿಡದೆ ಖಂಡಿಸಿ. ಪರಕೀಯರನ್ನು ತೊಲಗಿಸಲು ನಡೆಸಿದ ಅಹಿಂಸಾ ಸಮರ, ಇಂದು ನಮ್ಮವರನ್ನು ಹತೋಟಿಗೊಳಿಸಲು ನಡೆಸಬೇಕಾಗಿದೆ.

## ಸ್ವಾತಂತ್ರ್ಯ ಹೋರಾಟಗಾರರು

ರಾಜಕಾರಣಿಗಳು ರಾಜಾರೋಷವಾಗಿ ನಡೆಸುತ್ತಿರುವ ನಿರ್ಲಜ್ಜೆಯ ರಚ್ಚೆ ಮತ್ತು ರಂಪಗಳಿಂದ, ನೀವೆಲ್ಲ ದುಃಖಿತರಾಗಿ, ರೋಸೋಗಿ, ರೋಷಿತರಾಗಿದ್ದೀರಿ. ನಿಮ್ಮ ಸಹಪಾಟಿಗಳಲ್ಲನೇಕ ಮಹಾನುಭಾವರು, ಈ ರಾಕ್ಷಸಿ

ಕೃತ್ಯಗಳ, ನರ್ತನನೋಡಿ ಕೊರಗಿ, ಸ್ವರ್ಗಸ್ಥರಾಗಿದ್ದಾರೆ. ಮುಖ್ಯಾಗಿ ರುವ ನಿಮ್ಮನ್ನು ರಾಷ್ಟ್ರದ ದುಃಸ್ಥಿತಿ ದುಃಖಿತರನ್ನಾಗಿ ಮಾಡಿದೆ. ನಿಮ್ಮ ಶಿಸ್ತು, ಸರಳತೆ, ಒಗ್ಗಟ್ಟು ಅಹಿಂಸಾ ಧರ್ಮ, ಗಾಂಧಿ ಸಂಸ್ಕೃತಿ ಇವೆಲ್ಲ ಇಂದು ರಾಷ್ಟ್ರಸೇವೆಗೆ ಪುನಃ ಒಪ್ಪಿಸುವ ಸುವರ್ಣ ಅವಕಾಶ ಬಂದಿದೆ. ನಿಮ್ಮ ಜವಾಬ್ದಾರಿ ಅಪಾರವಾಗಿದೆ ದಯುಪಮಾಡಿ ಕರ್ತವ್ಯಶೀಲರಾಗಿ, ಅಪ್ರಮಾಣಿಕತೆಯನ್ನು ಬಿಡದೆ ನಿತ್ಯ ಖಂಡಿಸಿ. ಅಹಿಂಸಾ ಸಮರ ನಡೆಸಿ.

## ಉಪಾಧ್ಯಾಯರು

ಸ್ವಾತಂತ್ರ್ಯ ಪೂರ್ವದ ಗುರುಗಳ ಸ್ಫೂರ್ತಿ ಇಲ್ಲದೆ ಇದ್ದಿದ್ದರೆ, ಸ್ವಾತಂತ್ರ ಹೋರಾಟದ ನಾಯಕರುಗಳು, ಬಲಹೀನರಾಗುತ್ತಿದ್ದರು. ಇಂದು ಅವರ ಬುಡಕಟ್ಟಿನ ಉಪಾಧ್ಯಾಯ ವರ್ಗಕ್ಕೆ ಜವಾಬ್ದಾರಿ ಬಹಳ ಇದೆ ರಾಷ್ಟ್ರದ ಗಾಡಿ ಹಳಿ ತಪ್ಪಿದೆ. ಮೇಲೆತ್ತಿ, ಸುಲಲಿತವಾಗಿ ಚಲಿಸುವಂತೆ ಮಾಡುವ ಜವಾಬ್ದಾರಿ ತಮ್ಮದಾಗಿದೆ. ಯುವಕರಿಗೆ ಗಾಂಧಿ ಸಂಸ್ಕೃತಿಯನ್ನು ಮನಸಾರ ಬೋಧಿಸಿ, ಇಂದಿನ ನಾಯಕರುಗಳಿಗಿಂತ ಭಿನ್ನವಾದ ಮತ್ತು ಬಲವಾದ ನಾಯಕತ್ವವನ್ನು ಸೃಷ್ಟಿಸಿ ರಾಷ್ಟ್ರೋದ್ಧಾರಕರಾಗಿ. ನಿಮ್ಮ ಸಂಬಳಸಾರಿಗೆ, ಸೌಲಭ್ಯಗಳು, ನಿಮ್ಮ ಗುರುತರ ಮತ್ತು ಅನುಪಮ ಅಂತಸ್ತಿಗೆ, ಅಸಮಂಜಸವಾಗಿರುವ, ಅರ್ಥಹೀನಅಂಶ ಸರ್ವವೇದ್ಯವಾಗಿದೆ. ಸನ್ನಿಹಿತವಾಗಿರುವ ದುಃಸ್ಥಿತಿ, ನಿಮ್ಮ ಒಕ್ಕೊರಲಿನ, ಅವ್ಯವಹಿತ, ಹೋರಾಟಕ್ಕಾಗಿ, ಕಾತುರತೆಯಿಂದ ಕಾಯುತ್ತಿದೆ.

## ಕೈಗಾರಿಕೋದ್ಯೋಗಿಗಳು ಮತ್ತು ವ್ಯಾಪಾರಿಗಳು

ನಿಮ್ಮ ಬುದ್ಧಿಕುಶಲತೆ, ಉದ್ಯೋಗಶೀಲತೆ, ಚಿತ್ತೈಕಾಗ್ರತೆಗಳಿಂದ ಸಾವಿರಾರು ಜನಗಳಿಗೆ ಜೀವನ ಕಲ್ಪಿಸಿ, ನೀವು ಸಿರಿವಂತರಾಗಿದ್ದೀರಿ. ರಾಷ್ಟ್ರದ ಬೊಕ್ಕಸವನ್ನು ಭರ್ತಿ ಮಾಡುವ ಬಲಗಾರರಾಗಿದ್ದೀರಿ. ನಿಮ್ಮ ವಂಶೀಕರೇ, ಸ್ವಾತಂತ್ರಸಮರಕ್ಕಿದ್ದ ಹಣದ ಅವಶ್ಯಕತೆಗಳನ್ನು ಹವಣಿಸಿದ ಹಸನ್ಮುಖಿಗಳು. ಇಂದು ಕೂಡ, ನಿಮ್ಮ ಮಂತಿಗೆಯಿಲ್ಲದೆ ಚುನಾ

ವಣೆಗಳು ಅಸಾಧ್ಯ. ರಾಜಕೀಯ ಭ್ರಷ್ಟತೆಯಿಂದ ಸಾಮಾನ್ಯರ ಜೀವನ ದುರ್ಬರವಾಗಿದೆ. ಇಂದಿನ ಆಡಳಿತಗಾರರ ಕಿರುಕುಳ, ಭ್ರಷ್ಟತೆ, ಆಟಾಟೋಪ, ದರ್ಪ, ಸ್ವೇಚ್ಛಾ ಪ್ರವೃತ್ತಿ ದರ್ಬಾರು, ಇವೆಲ್ಲದರಿಂದ ನಾವು ಪಡೆದಿರುವ ಸ್ವಾತಂತ್ರ್ಯ ನಿಷ್ಪ್ರಯೋಜಕವಾಗಿದೆ. ಗುಲಾಮರಾಗಿದ್ದಾಗಲೇ ನಮ್ಮ ಪರಿಸ್ಥಿತಿ ಮೇಲಾಗಿತ್ತು ಎನ್ನುವ ಭಾವ ತಲೆದೋರುತ್ತಿದೆ. ನಿಮ್ಮಲ್ಲಿ ಅನೇಕರಿಗೆ ಆರ್ಥಿಕಸ್ವಾತಂತ್ರ್ಯವಿದೆ. ನಿಮ್ಮೆಲ್ಲರ ಒಗ್ಗಟ್ಟಿನಿಂದ ದೇಶದ ದುಸ್ಥಿತಿ ಬದಲಾಗಬೇಕಾಗಿದೆ. ಪರಿಸ್ಥಿತಿ ಹತೋಟಿಗೆ ತರಲು, ನಿಮ್ಮ ಸಂಘ ಸಂಸ್ಥೆಗಳ ಮೂಲಕ, ಅಹಿಂಸಾ ಸಮರ ನಡೆಸಬೇಕಾದ ತುರ್ತುಪರಿಸ್ಥಿತಿ ಒದಗಿದೆ, ದೇಶಹಿತಕ್ಕಾಗಿ ಮುಂದೆಬನ್ನಿ.

ಶಿಕ್ಷಣ ಸಮರ್ಥರು, ಸಾಹಿತಿಗಳು, ಬುದ್ಧಿಜೀವಿಗಳು, ವೈದ್ಯರು, ಕಲೋಪಾಸಕರು, ಕಲಾಕುಶಲರು, ಧಾರ್ಮಿಕರು(ಜಾತಿವಾದಿಗಳಲ್ಲ)ಮುಂತಾದ ದೇಶಭಕ್ತರು, ಇಂದಿನ ರಾಜಕೀಯ ಅಧಃಪತನದ ಬಗ್ಗೆ ಧೀರ್ಘವಾಗಿ ಆಲೋಚಿಸಬೇಕಾದ, ತುರ್ತುಪರಿಸ್ಥಿತಿ ಉದ್ಭವಿಸಿದೆ. ಸರ್ವಕ್ಷೇತ್ರಗಳ ಕ್ಷೀಣತೆಗೆ, ರಾಜಕೀಯ ರಚ್ಚೆ, ರಗಳೆ, ರಂಪಾಟ ಮತ್ತು ದೊಂಬರಾಟಗಳೇ ಪ್ರಮುಖ ಕಾರಣ ಎಂಬುದು ನಿರ್ವಿವಾದ. ಕೂಳಿಗಾಗಿ ಪರಿತಪಿಸುತ್ತಿರುವ ಭಾರತಕೋಟಿಯ ಹಸಿವು, ಆಕ್ರಂದಗಳು, ರಾಜಕೀಯಸ್ಥರ, ಮಾಯಮಂತ್ರ, ಮಿಥ್ಯಾಚಾರದ ಬೂಟಾಟಿಕೆಗಳಿಂದ ತಣಿಸಲಸಾಧ್ಯ. ರಾಷ್ಟ್ರದುಳಿವಿಗೆ ತಮ್ಮ ನೈಪುಣ್ಯತೆಯನ್ನು ನಿವೇದಿಸಬೇಕಾಗಿದೆ. ಪರರಾಷ್ಟ್ರಗಳ ಅಪಹಾಸ್ಯಕ್ಕೆ ಗುರಿಯಾಗಿ, ಅಸ್ವಸ್ಥ, ಸ್ವದೇಶದ ಸಮಸ್ಯೆಗಳ ಬಲೆಯ, ಸಂಪೂರ್ಣಮಾಹಿತಿಯ ಮಹಿಮರು ತಾವು. ಭಾರತ ಚೇತನದ, ಪುನರುಜ್ಜೀವನದ, ಸಂಸ್ಕೃತಿಯ, ವಿಕಾಸಶೀಲತೆಯ, ಪರಂಪರೆಗಳ, ಇತ್ಯಾರ್ಥ ಅಂಶಗಳನ್ನು ಮೈಗೂಡಿಸಿಕೊಂಡಿರುವ, ಮಹಾನುಭಾವರು, ತಾವು. ಅನುಷ್ಠಾನಯೋಗ್ಯ ಆಧ್ಯಾತ್ಮಿಕತೆಯಿಂದ "ಬಹುಜನಹಿತಾಯ ಬಹುಜನ ಸುಖಾಯಾ" ನಿಮ್ಮ ಸೋದರರು ಆ ಉಚ್ಛ ಆದರ್ಶವನ್ನೂ ಪಾಲಿಸುವಂತ ಪ್ರೇರಿಪಿಸುವ ಮಹಾಶಕ್ತಿಯನ್ನು ಭಾರತಾಂಬೇ ನಿಮಗೆ ದಯಪಾಲಿಸಲಿ.

ರಾಷ್ಟ್ರಭವಿಷ್ಯ, ಪುನರ್‌ನಿರ್ಮಾಣದ ಬೃಹತ್‌ಕಾರ್ಯದಲ್ಲಿ ಅಳಿಲುಸೇವೆಯೆಂಬ ಭಾವದಿಂದ ಮಾತ್ರವೇ, ಕೆಲವು ಮುಖ್ಯಾಂಶಗಳನ್ನು, ವಿನಂತಿಸುತ್ತಿದ್ದೇನೆ. ಇಂದು ಭಾರತ, ಕೇವಲ ಕೆಲವು ಮಂದಿ ವೈಶ್ಯರ, ಹಣವಂತರ, ಅಡಿಯಾಳು ರಾಷ್ಟ್ರದ ಸರ್ವ ಅಂಗಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡು ದರ್ಪ ನಡೆಸುತ್ತಿದ್ದಾರೆ. ಅವರು ಕೃಪೆಮಾಡಿದ ಪಕ್ಷ ಅಧಿಕಾರಕ್ಕೆ ಬರುತ್ತಿದೆ ಸ್ವಾತಂತ್ರ್ಯದ ಉಳಿವಿಗೆ, ಸಾಮಾಜಿಕ ನ್ಯಾಯ ಮತ್ತು ಸಮಾನತೆಗಳ ಸ್ಥಿರತೆಗೆ, ಅಧಿಕ ಆರ್ಥಿಕ ಅಭಿವೃದ್ಧಿ, ಅತ್ಯಗತ್ಯ. ಆರ್ಥಿಕ ಹಿನ್ನಡೆ ಮೂಢನಂಬಿಕೆಗಳನ್ನು ವೃದ್ಧಿಪಡಿಸಿ ಅಭಿವೃದ್ಧಿಯನ್ನು ಹಿಂಬೀಳಿಸುತ್ತದೆ. ಆರ್ಥಿಕ ಸಮಾನತೆಯಿಂದಲೇ ಸಮಾಜದ ಮಾರ್ಪಾಡು ಸಾಧ್ಯ. ಆರ್ಥಿಕ ಸ್ವಾವಲಂಬನೆ, ಸರ್ವಸಾಧನೆಗೂ ಸಹಾಯಕಾರಿ. ಆರ್ಥಿಕ ಪರಾಧೀನತೆ, ಗುಲಾಮರ ಗುರುತು. ಇದು ವ್ಯಕ್ತಿ, ಸಮಾಜ, ಸಂಸ್ಥೆ, ಪ್ರಾಂತ್ಯ ಮತ್ತು ರಾಷ್ಟ್ರಕ್ಕೂ ಅನ್ವಯಿಸುವ ಸತ್ಯ. ಕಳೆದ 47 ವರ್ಷಗಳಿಂದ, ಸಹಾಯಧನ, ಎಂಬ ಕಲ್ಪಿತ ನಾಮಾಂಕಿತದಿಂದ, ಪ್ರಪಂಚದ ಅನೇಕ ರಾಷ್ಟ್ರಗಳಿಂದ, ಸಾಲ ಪಡೆಯುತ್ತಲೇ ಬರುತ್ತಿದ್ದೇವೆ. ಹಂಗು, ಕೊಕ್ಕೆ ಕೊಂಡಿಗಳು, ಇಲ್ಲದೆ ನಿಸ್ವಾರ್ಥತೆಯಿಂದ, ನಿರಾಳವಾಗಿ ಸಾಲ ಕೊಟ್ಟಿರುವ ನಿದರ್ಶನಗಳು ಅಪರೂಪ. ಇಂದು, ರಾಷ್ಟ್ರದ ಸಾಲದ ಹೊರೆ ಬೃಹತ್‌ಸಂಖ್ಯೆಗಳ ಮೊತ್ತವಾಗಿದೆ. ಅಸಲು ಕಟ್ಟಲು ಅಶಕ್ತರಾಗಿ, ಬಡ್ಡಿ ಪಾವತಿಗಾಗಿ, ಹೊಸ ಸಾಲ ಕೊಡುವವರನ್ನು ಹುಡುಕುತ್ತಿದ್ದೇವೆ. ಆಂತರಿಕ ಸಾಧನೋಪಾಯಗಳ ಆಧಾರ ಅದೃಶ್ಯವಾಗಿವೆ. ಹೆಚ್ಚು ಭಾಗದ ಸಾಲದ ಹಣ, ಅಭಿವೃದ್ಧಿಗೆ, ಆತ್ಮಪೂರ್ವಕವಾಗಿ ಅರ್ಪಿತವಾಗಿಲ್ಲ. ಆಡಳಿತಗಾರರ ಅಪ್ರಾಮಾಣಿಕತೆಯೇ ಆರ್ಥಿಕ ಅವ್ಯವಸ್ಥೆಗೆ ಪ್ರಮುಖ ಕಾರಣ. ಅನಿರ್ಬಂಧಿತ ಮತ್ತು ಪೋಲು ಕಾರುಬಾರು ವೆಚ್ಚ, ಅಧಕ್ಷತೆಯ ಆಡಳಿತ, ಭೋಗ ಜೀವನ, ಎದ್ದುಕಾಣುತ್ತಿವೆ. ಸ್ವಾತಂತ್ರ್ಯ ಸಮರದ ನಾಯಕರುಗಳು, ರಾಷ್ಟ್ರದ ಹಿತಕ್ಕಾಗಿ ಅನುಸರಿಸಿ, ಬೋಧಿಸಿದ, ಸರಳ ಜೀವನ ಮತ್ತು ಅಪರಿಗ್ರಹ ಮುಂತಾದ ನೈತಿಕಮೌಲ್ಯಗಳ ತತ್ವಗಳನ್ನು ಗಾಳಿಗೆತೂರಿ, ಅದ್ದೂರಿಯ ಜೀವನ ಸರ್ವೇಸಾಮಾನ್ಯ

ವಾಗಿದೆ. ಆಸ್ತಿ, ಹಣ, ಅನಾವಶ್ಯಕ ವಸ್ತು ಮತ್ತು ಭೋಗ ಸಲಕರಣೆಗಳ ಸಂಗ್ರಹಣಾಭಿಲಾಷೆಯುವನು, ಪ್ರಜಾಪ್ರತಿನಿಧಿಯಾಗಿ ಮುಂದುವರಿಯಲನರ್ಹ. ಅಧಿಕಾರ ದರ್ಪ, ಧೋರಣೆ, ಪ್ರಜಾಪ್ರಭುತ್ವಕ್ಕೆ ಹೊಂದದು. ಅದು ಅಸಮಂಜಸ ಸರಳತೆಯಿಲ್ಲದ ಪ್ರತಿನಿಧಿ, ಸಾಮಾನ್ಯರಿಗೆ ಸಹಾಯಕನಾಗುವುದು ಅಸಾಧ್ಯ. ವ್ಯಕ್ತಿಗತವಾದ ಶೀಲತೆ ಇಲ್ಲದೆ ಇದ್ದರೆ, ರಾಜಕೀಯ ಉದ್ದೇಶ ಮತ್ತು ಕಾರ್ಯಗಳ ಪ್ರಗತಿ ಮುನ್ನಡೆ ಇಲ್ಲ. ದಟ್ಟ ದರಿದ್ರ ಜನಗಳ ಮುಂದೆ, ಅವರ ಸೇವೆ ಮಾಡಬೇಕಾದ ಪ್ರತಿನಿಧಿಗಳ ಆಡಂಬರ, ಪೋಷಾಕಿನ ಪ್ರದರ್ಶನದ ಪರಿಪಾಟ, ಮಹಾ ಕ್ರೂರ ಮತ್ತು ಪರಪೀಡಿತ

ಕಾಸಿಗೆ ಕಾಸನ್ನು ಹಾಕಿದರೆ ಮಾತ್ರ ಸಾಲಗಾರನಿಗೆ ಮುಕ್ತಿ.

ತನ್ನ ಸಾಗುವಳಿ ಜಮೀನನ್ನು ಅಡವಿಟ್ಟ ಆರಂಭಗಾರ, ಸಾಲತೀರಲು ಸರ್ವದಾ ತವಕಪಡುತ್ತಿರುತ್ತಾನೆ. ಸಂಸಾರದ ಸದಸ್ಯರೆಲ್ಲ, ತಮ್ಮ ಸುಖ ಸಂತೋಷಗಳನ್ನು ವರ್ಜಿಸಿ, ಹಗಲು ರಾತ್ರಿ, ಬಿಸಿಲು ಛಳಿ ಎನ್ನದೆ ದುಡಿದು ಹಣ ಉಳಿಸಿ, ಋಣಮುಕ್ತರಾಗುತ್ತಾರೆ. ಇಂದು, ರಾಷ್ಟ್ರದ ಆರ್ಥಿಕ ವಿಮುಕ್ತಿಗಾಗಿ ವ್ಯವಸಾಯಗಾರನಂತೆ ವ್ಯಾಕುಲತೆ ಪಡುವವರ ಸಂಖ್ಯೆ ಹೆಚ್ಚಬೇಕಾಗಿದೆ. ಮಾದರಿಯ ಮಣ್ಣಿನ ಮಗನ, ನಿತ್ಯ ವ್ಯವಹಾರ ಚಿತ್ರ, ಆಧುನಿಕ ಪಟ್ಟಣಿಗನಿಗೂ, ರಾಜ್ಯಸೂತ್ರಹಿಡಿದಿರುವ ಶ್ರೀಷ್ಠರಿಗೂ ಆದರ್ಶ ಅವನು ಬಹು ಸರಳಜೀವಿ, ಮಿತವಾದಿ, ನಿಗರ್ವಿ, ಗಾಂಭೀರ್ಯತೆಯುವ. ಆಧುನಿಕ ಅಭಿಪ್ರಾಯಗಳನ್ನು ಅರಿತು, ಪೂರ್ವಿಕರಿಂದ ಪರಂಪರೆಯಾಗಿ ಬಂದಿರುವ, ಸಂಪ್ರದಾಯ, ಇವೆಡನ್ನು ತುಲನೆ ಮಾಡಿ, ತಾಳೆ ಹಾಕಿ. ತನ್ನ ಸಂಸಾರದ, ಸಮಾಜದ ಅಭಿವೃದ್ಧಿಗೆ ಮಿತ ಮಾರ್ಗವನ್ನು ಅನುಸರಿಸುತ್ತಿದ್ದಾನೆ. ಬ್ಯಾಂಕು, ಮುಂತಾದ ಸರ್ಕಾರ ಹೊಣೆಗಾರಿಕೆಯ ಆರ್ಥಿಕಸಂಸ್ಥೆಗಳಿಂದ, ಸಾಲ ಪಡೆಯಲು ಹಿಂಜರಿಯುತ್ತಾನೆ. ಕಾರಣ, ಕಾರ್ಯವಿಧಾನ ವಿಳಂಬ ಮತ್ತು ಪೂರ್ತಿ ಹಣ ಕೈ ಸೇರದ ನಿಮಿತ್ತ, ಅದು ವಿಶಪ್ರಾಯ. ವಿಧಿ ಇಲ್ಲದೆ ಪಡೆದರೆ ಅದನ್ನು ಮದುವೆ, ಮನೆ ಕಟ್ಟುವ, ಮುಂತಾದ ಅನುಪಯುಕ್ತ ಮತ್ತು ವಿಲಾಸ

ಕಾರ್ಯಗಳಿಗೆ ಹಾಕದೆ, ವ್ಯವಸಾಯಕ್ಕೆ, ಪೂರ್ಣವಾಗಿ ವಿನಿಯೋಗಿಸಿ, ಭಾರ ಇಳಿಸಲು ದುಡಿಯುತ್ತಾನೆ ಅಭಿವೃದ್ಧಿ, ವಿದ್ಯಾಭ್ಯಾಸ, ಆರೋಗ್ಯ ಮುಂತಾದ ಅನಿವಾರ್ಯ ಬಾಬ್ತುಗಳಿಗೆ ಮಾತ್ರ ಮೀಸಲಾಗಿರಿಸಿ, ಸಾಲ ಮರುಪಾವತಿ ಮಾಡುತ್ತಾನೆ. ಕೊಡದೆ ಇದ್ದರೂ ಪರವಾಗಿಲ್ಲ, ಎಂಬ ತಪ್ಪು ಸಲಹೆಗಳಿಗೆ ಸೊಪ್ಪಾಕಿ, "ಕೊಟ್ಟ ಸಾಲ ಕೊಡದೆ, ನೆಟ್ಟ ಮರಕ್ಕೆ ನೀರು ಹಾಕದವನ ವಂಶ, ವೃದ್ಧಿಯಿಲ್ಲ ; ಎಂಬ ಹಿರಿಯರ ಸಂದೇಶ ಪಾಲನೆ ಮಾಡುತ್ತಾನೆ ಇಂಥ ಆದರ್ಶಪುತ್ರರ ಸಂಖ್ಯೆ ವಿರಳವಾದರೂ ಇದ್ದಾರೆ. ಅವರ ಸಂಸಾರಗಳೇ ಅಭಿವೃದ್ಧಿ ಹೊಂದಿ ಅವರದೇ ಆದ ಸಂತೋಷ ಹೊಂದಿ, ಗೌರವಕ್ಕೆ ಪಾತ್ರರಾಗಿದ್ದಾರೆ ನಿತ್ಯ ಉಪಯೋಗದ ಸಾಮಗ್ರಿಗಳ ಸ್ವಯಾರ್ಜಿತದಿಂದ ಸ್ವಾವಲಂಬನೆಯ ತತ್ವವನ್ನು ಅವರಿಂದ ಕಲಿಯಬೇಕು. ಆರ್ಥಿಕ ಅಭಿವೃದ್ಧಿ ಎಂದರೆ, ಹೊರಗಡೆಯಿಂದ ಕೊಳ್ಳುವ ಅಥವಾ ಆಮದು ಮಾಡಿಕೊಳ್ಳುವ ಹುಚ್ಚು ಪ್ರವೃತ್ತಿ ಅಲ್ಲ, ಎಂಬ ಆದರ್ಶ ತನ್ನ ಹಿರಿಯರಿಂದ ಅರಿತಿದ್ದಾನೆ. ವಿನಿಮಯ, ಮಾರುವ, ಅದಲು ಬದಲು, ಮುಯ್ಯಿ ಮತ್ತು ಕೂಲಿಗೆ ಧಾನ್ಯ ವಿತರಣೆಯ ವಿಶಿಷ್ಟ ಪದ್ಧತಿ ಇಂದಿಗೂ ಅನುಸರಿಸುತ್ತಿದ್ದಾನೆ ಇಂಥ ವಾಸ್ತವಿಕ ವಿಚಾರವಂತನಿಂದ ಕಲಿಯುವುದು ಬಿಟ್ಟು, ಡೆಲ್ಲಿಯ ಕೆಲವು, ಕಾರ್ಯರೂಪದ ಅನುಭವರಹಿತರ ನಿರ್ಣಯಗಳನ್ನು ನಡೆಸಬೇಕೆಂಬುದು ದುರಾದೃಷ್ಟಕರ ಮತ್ತು ಆತ್ಮಹತ್ಯಕಾರಿ.

48 ವರ್ಷಗಳ ಕೆಳಗೆ ನುಚ್ಚು ನೂರಾಗಿದ್ದ ಪುಟಾಣಿ ದ್ವೀಪ ದೇಶ ಜಪಾನು, ಸರ್ವತೋಮುಖ ಅಭಿವೃದ್ಧಿ ಹೊಂದಿ, ಬೃಹತ್ ರಾಷ್ಟ್ರಗಳಿಗೆ ಸವಾಲ್ ಒಡ್ಡುತ್ತಿದೆ. ಈ ಕೌತುಕತೆಗೆ ಕಾರಣವೇನು ? ಒಂದು ರಾಷ್ಟ್ರದ ಆರ್ಥಿಕಾಭಿವೃದ್ಧಿಗೆ ದುಡಿಮೆ, ಸೇವೆ ಮತ್ತು ತ್ಯಾಗಗಳ ತ್ರಿಕೋಣದ ಸಂಯೋಗ ಅವಶ್ಯಕ. ಪ್ರಕೃತಿ ದಯಪಾಲಿಸಿರುವ ಎರಡು ಕೈಗಳ ಮಾನವ ವಿವರಿಸಲು ಮನಸ್ಸು ಮಾಡಬೇಕಾಗಿದೆ. ನಮ್ಮಲ್ಲಿ ಮಾಯವಾಗಿರುವ ಒಗ್ಗಟ್ಟಿನ ದುಡಿಮೆ, ಉಜ್ವಲ ರಾಷ್ಟ್ರಪ್ರೇಮ, ಎಲ್ಲರಿಗಿಂತ ಮೇಲಿರ

ಬೇಕೆಂಬ ಆಕಾಂಕ್ಷೆ, ಉತ್ಸಾಹ, ಅಭಿಮಾನ, ಆತ್ಮಗೌರವ ಅವರಲ್ಲಿ ತುಂಬಿ ತುಳುಕುತ್ತಿದೆ.

ಮಂತ್ರಿಗಳ ಮತ್ತು ಆಡಳಿತ ವರ್ಗದವರ, ಸುಖ ಸೌಕರ್ಯಗಳಿಗೆ ಮೀಸಲಾಗಿರಿಸಿರುವ ಕೋಟಿ ಕೋಟಿ ಖರ್ಚಿನ ಅತಿಥಿ ಗೃಹ ಮತ್ತು ಪ್ರವಾಸ ಮಂದಿರಗಳು, ಇಂದಿನ ನಾಗರಿಕತೆಯಲ್ಲಿ ಅವಶ್ಯಕವೆ? ಎಂಬ ಅಂಶ, ಬಡ ಸಾಲಗಾರ ದೇಶ, ತಕ್ಷಣ ಶೋಧಿಸಬೇಕಾದ ಅವಶ್ಯಕತೆ ಇದೆ. ಅತಿ ಸಂಪದ್ಭರಿತವಾದ ಅಮೇರಿಕದ ಅಧ್ಯಕ್ಷರು ಹೋಟೆಲುಗಳಲ್ಲಿ ಇಳಿದು ಕೊಳ್ಳುವುದು ಅವರ ಅಂತಸ್ತಿಗೆ, ಸುರಕ್ಷತೆಗೆ ಕೊರತೆ ತರುತ್ತಿಲ್ಲ.

ಗಾಂಧಿವಾದಿ, ಮುರಾರ್ಜಿ ದೇಸಾಯಿ ಅವರು, ಪ್ರಧಾನಿಯಾಗಿ, ಸಾರ್ವಜನಿಕ ವಿಮಾನದಲ್ಲಿ ತಮ್ಮ ಪರದೇಶದ, ಯಾತ್ರೆಗಳನ್ನು ಪೂರೈಸುತ್ತಿದ್ದರು. ಎಂಥ ಶ್ರೇಷ್ಠ ರಾಷ್ಟ್ರಪ್ರೇಮ, ಉಜ್ವಲ ದೇಶಭಕ್ತಿ. ಅಧ್ಯಕ್ಷರು, ಪ್ರಧಾನಿ ಮುಂತಾದ ಶ್ರೇಷ್ಠರು ಈ ಉಳಿತಾಯದ ವಿಧಾನಗಳನ್ನು ಅನುಸರಿಸಿ ಉಳಿದವರಿಗೆ ಮಾದರಿಯಾಗಲಿ ಎಂದು ಹಾರೈಸೋಣ.

ಸರ್ಕಾರ ಕೊಂಡು ಸಂರಕ್ಷಿಸುತ್ತಿರುವ, ಸಾವಿರಾರು ಮೋಟಾರು ಗಾಡಿಗಳ ಸಂಖ್ಯೆ ಬಹಳಷ್ಟು ಇಳಿಸಿ, ಬೇರೆ ವ್ಯವಸ್ಥೆ ಯೋಚಿಸಬಹುದು. ಕೋಟಿ ಕೋಟಿ ರೂಪಾಯಿಗಳ ಖರ್ಚಿನ, ಭವ್ಯ ಬಂಗಲೆಗಳ ರಚನೆ ಮತ್ತು ಸಂರಕ್ಷಣೆಗಳು ಪರದೇಶದ ಸಾಲಕ್ಕೆ ಬಡ್ಡಿ ಕೊಡಲು ಅಶಕ್ತವಾಗಿರುವ, ಈ ಬಡನಾಡಿಗೆ ಈ ಆಡಂಬರ ಅಪರಾಧವಲ್ಲವೆ? ಸಂಪದ್ಭರಿತರಾದ ಪ್ರಜೆಗಳು ಸರ್ಕಾರದ, ಆಸ್ತಿ ಅಲ್ಲವೆ ? ಕೇಂದ್ರ ಮತ್ತು ಪ್ರಾಂತ್ಯಗಳ ಅನೆಗಾತ್ರದ ಮಂತ್ರಿ ಮಂಡಲ, ಅಲ್ಲದೆ ಪ್ರತಿ ಪ್ರಜಾಪ್ರತಿನಿಧಿಗೂ ಮಂತ್ರಿಮಟ್ಟದ ಭೋಗಾವಕಾಶದ ಅಂತಸ್ತುಗಳ ನಿರ್ಮಾಣ, ಮುಕ್ಕಾಲುಪಾಲು ಜನ ದಟ್ಟದರಿದ್ರರಾಗಿರುವ ದೇಶಕ್ಕೆ ಬೇಕೆ ? ಸಂವಿಧಾನ ಕರ್ತರು ಹತ್ತು ಜನಕ್ಕಿಂತ ಹೆಚ್ಚು ಮಂತ್ರಿಗಳು ಬೇಡ; ಪ್ರತಿನಿಧಿಗಳು, ಕಡ್ಡಾಯವಾಗಿ, ತಮ್ಮ ಕ್ಷೇತ್ರದೊಳಗೆ ವಾಸಿಸಬೇಕೆಂದು, ಲಾಭಕರ ಹುದ್ದೆಗಳ ಸ್ವೀಕಾರ, ನಿಷೇಧಿಸುವುದು ಉತ್ತಮ. ಪ್ರತಿಫಳಿಗೆಯಲ್ಲೂ

ಸುದ್ದಿ ತಿಳಿಸುವ, ವ್ಯವಸ್ಥೆ ಇರುವ, ಇಂದಿನ ಆಧುನಿಕತೆಯಲ್ಲಿ ದೂರದ ಊರುಗಳ, ಪಟ್ಟಣಗಳ, ಮುಖ್ಯವಾಗಿ, ಡೆಲ್ಲಿಯ ಸಮ್ಮೇಳನ ಮತ್ತು ಗೋಷ್ಠಿಗಳ ದುಬಾರಿ ಖರ್ಚಿನ ಅವಶ್ಯಕತೆ ಇದೆಯೆ? ಬಡವನಾದ ಮತದಾರನ ಸೇವೆ, ಮಂತ್ರಿಗಳ, ಅಧಿಕಾರಿಗಳ ಪ್ರಾಥಮಿಕ ಕರ್ತವ್ಯ. ಇಂದು ಯಾವ ಘಳಿಗೆಯಲ್ಲಿ ಕೇಳಿದರೂ, "ಮಿಾಟಿಂಗಿನಲ್ಲಿ ಇದ್ದಾರೆ ಸಾಹೇಬರು" ಎಂಬ ಉತ್ತರವೇ ಸಾಮಾನ್ಯ. ಹಿಂದಿನ ಮೈಸೂರು ಮಹಾರಾಜರು, ಅವರ ಮಂತ್ರಿಮಂಡಲ ಕಡ್ಡಾಯವಾಗಿ, ಜನರ ಸಮಸ್ಯೆ ಪರಿಹಾರಕ್ಕಾಗಿ ದೂರದ ಹಳ್ಳಿಗಳಲ್ಲಿ ಮೊಕ್ಕಾಂ ಮಾಡುತ್ತಿದ್ದುದು ಇತಿಹಾಸವಾಗಿದೆ. ಎಷ್ಟು ಜನ ಪ್ರಜಾಪ್ರತಿನಿಧಿಗಳು ಹಳ್ಳಿಯವರ ಜಗಲಿ ಮೇಲೆ, ಎಷ್ಟು ದಿನ ಮಲಗಿ ಅವರಲ್ಲಿ ಮಿಳಿತವಾಗಿದ್ದಾರೆ?

ಸರ್ಕಾರ ನಡೆಸುತ್ತಿರುವ ಪ್ರತಿಯೊಂದು ಕಾರ್ಖಾನೆ, ವ್ಯವಸ್ಥೆಗಳು ಕೋಟಿ ಕೋಟಿ ರೂಪಾಯಿಗಳ ನಷ್ಟ ಅನುಭವಿಸುತ್ತಿರುವ ಅಂಶ, ಸರ್ವವೇದ್ಯವಾಗಿದೆ. ಘನತೆ, ಪ್ರತಿಷ್ಠೆಗಳು ಸೂಕ್ತ ನಿಷ್ಕರ್ಷೆಗಳಿಗೆ ಅಡ್ಡಿ ಬರಬಾರದು, ಇಂಥ ಮಹಾಪರಾಧಗಳು, ಅನೇಕ, ಅವಿಚ್ಛಿನ್ನ, ಮತ್ತು ಅಪರಿಮಿತ.

## ಪಾನ ನಿರೋಧ

ಸ್ವಾತಂತ್ರ್ಯ ಸಮರದ ನಾಯಕರುಗಳು ಒಕ್ಕೊರಲಿನಿಂದ ಮಾಡಿದ ಪಾನನಿರೋಧ ಒಪ್ಪಂದ ಉಪೇಕ್ಷಿಸಲ್ಪಟ್ಟಿದೆ. ಅದಕ್ಕೆ ಬದಲಾಗಿ, ಹಳ್ಳಿ ಹಳ್ಳಿಗೂ ಸರ್ಕಾರ ಕುಡಿತ ಸುಲಭವಾಗಿ, ನಿರಂತರವಾಗಿ, ದೊರೆಯುವ ಏರ್ಪಾಡು ಮಾಡುತ್ತಿದೆ. ಮೊದಲು, ಕುಡಿಯುತ್ತಿದ್ದ ಒಬ್ಬಿಬ್ಬರು, ಎಲ್ಲರ ಧಿಕ್ಕಾರಕ್ಕೆ ಗುರಿಯಾಗುತ್ತಿದ್ದರು. ಇಂದು ಕುಡಿಯದೆ ಇರುವ ಸತ್ಪುರುಷರನ್ನು ಹುಡುಕುವುದು ಬಹು ಕಷ್ಟವಾಗಿದೆ. ನಿಷಕ್ರಿಯ(?)ಳಗಾಗುವ ಯುವ ಜನಾಂಗ ರಾಷ್ಟ್ರ ನಿರ್ಮಾಪಕರಾಗಬಲ್ಲರೆ? ಈ ಪರಿಸ್ಥಿತಿ ಬದಲಾಗುವ ಸಾಧ್ಯತೆಗಳಿವೆ. ಶ್ರೇಷ್ಠರು, ಸೂತ್ರಧಾರಿಗಳು ನಿಷ್ಕರ್ಷಿಸಬೇಕು

# ಏಕರೂಪದ ಲಿಪಿ

ಇಂದಿಗೂ ನಾವು ಅಧಿಕೃತ ಮತ್ತು ಏಕರೂಪದ ಭಾಷೆಯನ್ನು ಆಯ್ದುಕೊಳ್ಳಲು ಅಶಕ್ತರಾಗಿದ್ದೇವೆ. ಭಾಷೆಗಳ ಆಧಾರದಮೇಲೆ, ಪ್ರಾಂತ್ಯಗಳ ವರ್ಗೀಕರಣಗಳಿಂದಾಗಿ, ಪ್ರತಿಪ್ರಾಂತ್ಯ ತನ್ನ ಭಾಷೆಗೇನೆ ಪ್ರಾಮುಖ್ಯತೆ ಕೊಡುತ್ತಿದೆ. ಪಕ್ಕದ ಪ್ರಾಂತ್ಯದ ಜನ ಪರಕೀಯರಾಗಿದ್ದಾರೆ. ನಾಮ ಫಲಕಗಳು, ವಿದ್ಯಾವಂತರಿಗೂ ಅರ್ಥವಾಗುತ್ತಿಲ್ಲ.

ಏಕರೂಪದ ಲಿಪಿ ತರುವ ಮೂಲಕ, ಈ ಸಮಸ್ಯೆಯನ್ನು ಬಹುಮಟ್ಟಿಗೆ ಪರಿಹಾರ ಮಾಡಿಕೊಳ್ಳಬಹುದು. ಕನ್ನಡ ಮತ್ತು ತೆಲಗು ಲಿಪಿಗಳಲ್ಲಿ ವ್ಯತ್ಯಾಸ ಬಹು ಕಡಿಮೆ. ಅವೆರಡನ್ನು ಒಂದು ಲಿಪಿಯಾಗಿ, ಈ ವೇಳೆಗೆ ಮಾಡಿದ್ದರೆ ಚೆನ್ನಾಗಿರುತ್ತಿತ್ತು. ಅಧಿಕೃತ ಹದಿನೈದು ಭಾಷೆಗಳ ಲಿಪಿಗಳನ್ನು ಜನಸಂಖ್ಯೆ ಪ್ರಮಾಣದ ಮೇಲೆ, ಲಿಪಿಗಳನ್ನು ಆಯ್ದು, ಒಂದೇ ತರಹದ ಲಿಪಿಯನ್ನು ಜಾರಿಗೆ ತಂದರೆ, ಬಹು ಉಪಯುಕ್ತ. ಯೂರೋಪ ರಾಷ್ಟ್ರಗಳಲ್ಲಿ ಒಂದೇ ತರಹ ಲಿಪಿ ಇದೆ. ಭಾರತದ ಎಲ್ಲಾ ಭಾಷೆಗಳ ಮೂಲ ಏಕರೂಪವಾದುದು. ಬಹು ಪದಗಳು ಒಂದೇ ಅರ್ಥದವು. ಉದಾಹರಣೆಗೆ–ಅಚಲ, ಅಂತಃಪುರ, ಆರ್ಯ, ಋಷಿ, ಔಷಧಿ, ಕರ್ತ, ಕೇಂದ್ರ, ಗಗನ, ಚಂದನ, ಬ್ರಹ್ಮಚರ್ಯ, ವಕೀಲ, ಶಾಂತಿ, ವನ. ಅಂಕಿತನಾಮಗಳೆಲ್ಲ ಒಂದೇ. ಭಾಷಾಜ್ಞಾನ, ಅನೇಕ ಸಂಶಯ ಮತ್ತು ಭಿನ್ನಾಭಿಪ್ರಾಯಗಳನ್ನೂ ತೊಡೆದು, ರಾಷ್ಟ್ರಏಕೀಕರಣಕ್ಕೆ ಪ್ರಮುಖವಾದ ಕೊಂಡಿಯಾಗಲು ಸಾಧ್ಯ.

# ತರುಣರ ತರಬೇತಿ

ವಿದ್ಯಾನಿಲಯಗಳ ಮತ್ತು ವಿದ್ಯಾಭ್ಯಾಸ ಕ್ರಮದಲ್ಲಿ ಕೋಮನುಸಾರದ ಪ್ರತ್ಯೇಕತೆ ಅಪಾಯಕಾರಿ. ವಿದ್ಯಾಪ್ರವೀಣರು ಈ ನ್ಯೂನತೆಯನ್ನು ಸರಿಪಡಿಸಬೇಕಾದುದು ರಾಷ್ಟ್ರೀಯನಿಯತಿ : ಜಾತಿ, ಮತ, ಪಂಥ ಮತ್ತು ಗುಂಪುಗಳ ಆಧಾರದಮೇಲಿನ, ರಾಜಕೀಯ ವಿನಾಯಿತಿಗಳು

ವಿನಾಶಕಾರಿ. ಇದು ರಾಷ್ಟ್ರೀಯ ಸೌಹಾರ್ದತೆಗೆ ಕೊಡಲಿಪೆಟ್ಟು. ಮಕ್ಕಳನ್ನು ಮತ್ತು ಯುವಕರನ್ನೂ ಮತನಂಬಿಕೆಗಳಲ್ಲಿ ಬಂಧಿಸಿ, ಪೋಷಿಸುವುದು ಪರಿತಾಪಕಾರಿ. ವಿಜ್ಞಾನದ ಒರೆಗಲ್ಲಿಗೆ ಒಳಗಾಗದ, ಮತಧರ್ಮದ ಅನುಸರಣೆ ಅನಾಗರೀಕತೆಯ ಅಚ್ಚು ಸಮಾನತೆ ಮತ್ತು ಸ್ವಾತಂತ್ರ್ಯಗಳನ್ನು ವೃದ್ಧಿಪಡಿಸಲಾರದ ಸಂಪ್ರದಾಯ, ಸುಸಂಸ್ಕೃತಿಯಲ್ಲ. ಸರ್ವಮತಗಳ ತತ್ವ ಮತ್ತು ಆದರ್ಶಗಳ, ಪರಿಚಯಮಾಡಿಸಿ, ವಿಶ್ವಮಾನವರನ್ನಾಗಿಸುವುದು ಹಿರಿಯರ ಆದ್ಯ ಕರ್ತವ್ಯ. ಅನಾನುಕೂಲತೆಗಳಿಗೊಳಗಾಗಿರುವವರ ಅನುಕೂಲತೆಗಾಗಿ, ನಿಸ್ವಾರ್ಥಸೇವೆ ಸಲ್ಲಿಸುತ್ತಿರುವ ಮತ್ತು ಸರ್ವಮತ ಸಮನ್ವಯ ಬೋಧನೆಯ ರಾಮಕೃಷ್ಣಮಿಷನ್ ಅಂತಹ ಸಂಸ್ಥೆಗಳ ಅಭಿವೃದ್ಧಿ ಅತ್ಯಾವಶ್ಯಕ. ವಿದ್ಯಾಭ್ಯಾಸ ವ್ಯವಸ್ಥೆಯಲ್ಲಿ ನೀತಿಭೋಧೆಯು ಅವಶ್ಯಕತೆ ನಿರ್ವಿವಾದ. ಉಚ್ಚಸ್ಥಾನಗಳನ್ನು ಅಲಂಕರಿಸಿರುವ ಮಹನೀಯರು, ತಮ್ಮ ಸ್ವಂತ ಮತನಂಬಿಕೆಯ ಪ್ರದರ್ಶನ ಮಾಡುವುದು ಪೈಶಾಚಿಕತನ. ಅದಕ್ಕಾಗಿ ಮಾಡುವ ಸರ್ಕಾರಿ, ಸವಲತ್ತು ಮತ್ತು ವೆಚ್ಚ ಅಕ್ಷಮ್ಯ. ಎಲ್ಲಾ ಮತಗಳ ಮತ್ತು ಸಂಸ್ಥೆಗಳ ಪ್ರಮುಖರನ್ನೂ ಸಂದರ್ಶಿಸಿ ಸಮಭಾವ ವ್ಯಕ್ತಪಡಿಸುವುದು ಸಂವಿಧಾನದ ಐಹಿಕ ( Secularism ) ತತ್ವದ ಸೋಪಾನ.

ಈ ಪರಿಪಾಟಗಳ ಪರಿಣಾಮ ಪರಿಭಾವಕಾರಿ. ಸ್ವತಂತ್ರ ಭಾರತದಲ್ಲಿ ಹಿಂದುಗಳ ನಾಯಕ, ಮುಸಲ್ಮಾನರ ನಾಯಕ, ಹಿಂದುಳಿದವರ ಮುಂದಾಳು, ಬುದ್ಧರ ಪ್ರಧಾನ. ಕ್ರೈಸ್ತರ ಮಾರ್ಗದರ್ಶಿ, ಭೋರ್ಕ್ಕಗಳ ದಳವಾಯಿ, ಮರಾಠಿಗರ, ರೆಡ್ಡಿಗಳ, ವೀರಶೈವರ, ಒಕ್ಕಲಿಗರ ಮುಂತಾದ ನೂರಾರು ಪಂಗಡಗಳ, ನಾಟಕೀಯ ಅನಾಮಧೇಯ ನಾಯಕರುಗಳು, ನಾಯಿಕೊಡೆಯಂತೆ ಸಿಡಿದೆದ್ದಿದ್ದಾರೆ. ಆದರೆ ಒಟ್ಟು ಜನತೆಯ ಭಾರತೀಯ ನಾಯಕರ ಅಭಾವ ಅವಮಾನಕರ ಪರಕೀಯರು ನಮ್ಮನ್ನೂ ಗುಲಾಮರನ್ನಾಗಿ, ಹಿಡಿದಿಟ್ಟುಕೊಂಡು, ತಮ್ಮ ಆ ಡ ಳಿ ತ ವ ನ್ನು ಮುಂದುವರಿಸಿಕೊಂಡು ಹೋಗಲು, ಅನುಸರಿಸಿದ ಕುಯುಕ್ತಿ, ಸ್ವತಂತ್ರಭಾರತದಲ್ಲೂ ಮುಂದುವರಿಯುತ್ತಿರುವುದು ದುರಾದೃಷ್ಟಕರ.

ಈ ನಗೆಪಾಟಲು ನಾಯಕರುಗಳು, ಜನಸಾಮಾನ್ಯರಿಗೆ, ಪ್ರಜಾಪ್ರಭುತ್ವದ ಪ್ರಭುಗಳಿಗೆ, ಅವರ ಘನತೆ ಏನು, ಜವಾಬ್ದಾರಿ ಏನು, ಎಂಬ ಅರಿವು ಮೂಡಿಸುವ ಪ್ರಾರ್ಥಮಿಕ ಕರ್ತವ್ಯವನ್ನು, ಬೇಕೆಂದೇ ಮಾಡುತ್ತಿಲ್ಲ. ಅದಕ್ಕೆ ಬದಲಾಗಿ, ತಮ್ಮ ಅಧಿಕಾರ ದರ್ಪವನ್ನು ಮುಂದುವರಿಸಿಕೊಂಡು ಹೋಗಲು, ಸಾಮಾನ್ಯರನ್ನು ವಿಭಾಗಿಸಿ ಅಜ್ಞಾನದಲ್ಲಿ ಇಡುವ, ಎಲ್ಲಾ ಕುತಂತ್ರಗಳನ್ನು ನಡೆಸುತ್ತಲೇ ಬರುತ್ತಿದ್ದಾರೆ ಜನಸಾಮಾನ್ಯರನ್ನೂ ದಿಕ್ಕಿಲ್ಲದವರನ್ನಾಗಿ, ಕೈಲಾಗದವರನ್ನಾಗಿ, ಬೆನ್ನೆಲುಬಿಲ್ಲದವರನ್ನಾಗಿ, ಸ್ವಶಕ್ತಿಯಲ್ಲಿ ನಂಬಿಕೆ ಇಲ್ಲದವರನ್ನಾಗಿ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ ಇಂದು ಜಗತ್ತಿನಲ್ಲಿ ನಾಯಕನಾಗಿ ಮೆರೆಯಲು ಅನುಸರಿಸುತ್ತಿರುವ ಸುಪ್ತಪಾತಕಗಳನ್ನು ಮಹಾತ್ಮಗಾಂಧಿಯವರ ಮೊಮ್ಮಗ ಅರುಣ್ ಗಾಂಧಿಯವರು ಬಹು ದುಃಖದಿಂದ ಮೊನ್ನೆ ವರ್ಣಿಸಿದ್ದಾರೆ-ಅಂದರೆ ದುಡಿಯದೆ ಸಂಪತ್ತಿನ ಸಂಗ್ರಹ, ಪ್ರಜ್ಞೆರಹಿತ ಮೋಜು, ಚಾರಿತ್ರ್ಯ ರಹಿತ ಜ್ಞಾನ, ನೈತಿಕ ರಹಿತ ವ್ಯಾಪಾರ, ಮಾನವೀಯತೆ ಇಲ್ಲದ ವಿಜ್ಞಾನ, ಅರ್ಪಣೆ ರಹಿತ ಪೂಜೆ, ನೀತಿ ಇಲ್ಲದ ರಾಜಕೀಯ. ಇಂಥ ನಾಯಕರುಗಳಿಗೆ ಮಾನ್ಯತೆ ಅಸಾಧ್ಯ. ಈ ವಿಷಮಸ್ಥಿತಿ ಬದಲಾಗಲು, ಬುದ್ಧಿಜೀವಿಗಳ ಹೆಚ್ಚು ಹೆಚ್ಚಾದ ಸ್ವತಂತ್ರ ಮತ್ತು ಮೂಲಭೂತವಾದ ಆಲೋಚನೆ, ಹೆಚ್ಚು ಹೆಚ್ಚಾದ ಅಹಿಂಸಾಪ್ರತಿಭಟನೆ ನಿಸ್ವಾರ್ಥ ಸೇವೆಗಾಗಿ ರಾಷ್ಟ್ರ ಕಾಯುತ್ತಿದೆ. ಕಾಲ ಮಿಂಚುತ್ತಿದೆ ಮಾಡಬೇಕಾದ ಕರ್ತವ್ಯಗಳಿಗೆ ಕೊನೆಯಿಲ್ಲ. ನಿರ್ಣಯ ಹಕ್ಕುಳ್ಳ ಶ್ರೇಷ್ಠರಿಗೂ, ದೃಢಸಂಕಲ್ಪ ಕೈಕೊಳ್ಳುವ, ಚೈತನ್ಯಶಕ್ತಿ, ಆತುರತೆ ಮತ್ತು ಕಾತುರತೆಗಳನ್ನೂ ಕೈವಲ್ಯಪತಿ ಬೇಗ ಕರುಣಿಸಲಿ ಎಂದು ಕೈ ಮುಗಿಯೋಣ.

ನಮ್ಮ ಹಿಂದಿನ ತಲೆಮಾರಿನವರಿಗೂ, ನಮಗೂ ಆಶ್ರಯಧಾತೆಯಾಗಿರುವ ಭಾರತಮಾತೆಯ, ಮಡಿಲನ್ನು ಪರಿಶುದ್ಧವಾಗಿ ನಮ್ಮ ಮುಂದಿನ ಪೀಳಿಗೆಯ ಸುಖ, ಸೌಕರ್ಯ ಮತ್ತು ಸಂತೋಷಗಳಿಗಾಗಿ ಮುಡುಪಾಗಿಡುವ ದೃಢಸಂಕಲ್ಪ ಮತ್ತು ಚೈತನ್ಯ ನಮ್ಮೆಲ್ಲರಿಗೂ ಒದಗಲಿ.



# ದೇವ ತಪೋವನ ಸೇವಾನ್ಯಾಸ

ತೊಂಬತ್ತೆರಡು ಸಂವತ್ಸರ, ಸಾರ್ಥಕ ಗ್ರಾಮಜೀವನವನ್ನು ಜರುಗಿಸಿದ, ನನ್ನ ಜನ್ಮಧಾತ, ಪಟೇಲ್ ದೇವೇಗೌಡರ ಜ್ಞಾಪಕಾರ್ಥವಾಗಿ, ಈ ನ್ಯಾಸವನ್ನು 1988ರಲ್ಲಿ ನೋಂದಣಿ ಮಾಡಲಾಗಿದೆ. ಇವರು, ನನ್ನೂರು ಬನ್ನಿಮುಕ್ಕೋಡ್ಲು ಮತ್ತು ಸುತ್ತಮುತ್ತಲಿನ ಹತ್ತಾರು ಗ್ರಾಮಗಳ, ನಿವಾಸಿಗಳ ಪ್ರೀತಿಗೆ ಪಾತ್ರರಾಗಿದ್ದರು. ಅವರೆಲ್ಲ "ಅಪ್ಪ" ಎಂತಲೇ ಸಂಬೋಧಿಸುತ್ತಿದ್ದರು. ಆಗಿನ ಕಾಲದ, ಗ್ರಾಮದ ಹಿರಿಯರ ಆದರ್ಶ ಅದ್ಭುತವಾದುದು. ನಾನು ನನ್ನದು ಎನ್ನುವುದು ಬಹು ಕಡಿಮೆ. ಪರಸ್ಪರ ಸಹಾಯ, ಒಗ್ಗಟ್ಟಿನ ಸಮಾಜಭಾವ ಎದ್ದು ಕಾಣುತ್ತಿತ್ತು. ಜಾತಿ, ಕುಲ, ಮೇಲು ಕೀಳು ಅನ್ನುವ ವ್ಯತ್ಯಾಸಗಳು ಅಷ್ಟು ಕಾಣುತ್ತಿರಲಿಲ್ಲ. ತಂದೆಯವರ ಮುಂದಾಳತ್ವದಲ್ಲಿ ಒಟ್ಟಾಗಿ, ಚಾವಡಿ, ಗುಡಿ, ಶಾಲೆ, ನಿರ್ಗತಿಕರ ಮನೆಗಳನ್ನು ಸರಿಪಡಿಸುತ್ತಿದ್ದರು. ನಿರಾಳಿ ದಾರಿ, ದನಕರುಗಳ ಓಣಿ, ಊರಿಂದ ಊರಿಗೆ ರಸ್ತೆ, ಕೆರೆಗಳನ್ನು ಸರಿಮಾಡುವುದು, ತೋಪು, ಸಾಲುಮರ ನೆಡುವುದು, ವಾರ್ಷಿಕ ವಾಡಿಕೆ. ಈ ಮುಗ್ಧ ಜನ, ನಮ್ಮ ಸಂಸಾರಕ್ಕೆ ಒಂದು ಶತಮಾನ ಕಾಲ ವೃಷ್ಟಿಸಿರುವ ಪ್ರೀತಿ ವಿಶ್ವಾಸ ಅಷ್ಟಿಷ್ಟಲ್ಲ. ಇಂಥ ಪ್ರೀತಿ, ಅನ್ಯೋನ್ಯತೆ ಇಂದು ಒಂದು ಕನಸು.

ಅವರೆಲ್ಲ ಹೊರಿಸಿರುವ, ಅಪೂರ್ವ ವಾತ್ಸಲ್ಯದ ಋಣ, ಈ ನ್ಯಾಸದ ಮೂಲಕ ಹರಿಸಲು ಪ್ರಯತ್ನ ಪಡಲಾಗಿದೆ. ಇದರ ಪ್ರಮುಖ ಆದರ್ಶ: ಉಳುಮೆಯ ಉತ್ಪತ್ತಿಯಿಂದ ಮಾನವತೆಯ ಪೂಜೆ ಮತ್ತು ಸೇವೆ. ದೇವ ತಪೋವನ ಸೇವಾನ್ಯಾಸ "ದೇವರು" ಗ್ರಂಥವನ್ನು ಸುಲಭ ಬೆಲೆಗೆ